## ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೩೮

# ಸುಭಾಷಿತ ಸಂಗ್ರಹಗಳು

ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.



—— ಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೨

ಬೆಲೆ: ೨ ಆಣೆ

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕ ಮಾಲೆ

೧. ಖಗೋಳಶಾಸ್ತ್ರ ಪ್ರವೇಶ-
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್ಸಿ.

೨. ಸಮಾಜದ ರೋಗ ರುಜಿನಗಳು-
ಜಿ. ಹನುಮಂತರಾವ್, ಎಂ.ಎ.

೩. ತೆರಿಗೆ-ಬಿ. ಆರ್. ಸುಬ್ಬರಾವ್, ಎಂ.ಎ.

೪. ನವರತ್ನಗಳು-ಎಚ್. ಸುಬ್ಬಜೋಯಿಸ್, ಎಂ.ಎಸ್ಸಿ.

೫. ನಮ್ಮ ಹಳ್ಳಿಗಳು-ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

೬. ಕುಮಾರವ್ಯಾಸ-ಎಸ್. ವಿ. ರಂಗಣ್ಣ, ಎಂ.ಎ.

೭. ಹಂಪೆಯ ಹರಿಹರ-ಡಿ. ಎಲ್. ನರಸಿಂಹಾಚಾರ್, ಎಂ.ಎ.

೮. ಕನ್ನಡಸಾಹಿತ್ಯ-ಕೆ. ವೆಂಕಟರಾಮಪ್ಪ, ಎಂ.ಎ.

೯. ವಿದ್ಯುಚ್ಛಕ್ತಿಯ ವೈಭವ-ಬಿ. ಎ. ಕೃಷ್ಣಸ್ವಾಮಿರಾವ್,
ಎಂ.ಎಸ್ಸಿ.

೧೦. ಪಂಪ-ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ-ಎ. ನಾರಾಯಣರಾವ್, ಎಂ.ಎಸ್ಸಿ.

೧೨. ಕನಸುಗಳು-ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

೧೩. ಮದುವೆ-ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ-ಎಸ್. ಗೋಪಾಲಸ್ವಾಮಿ, ಎಂ.ಎ.

೧೫. ವಾಯುಗುಣ-ಕೆ. ಶೇಷಾದ್ರಿ ಅಯ್ಯಂಗಾರ್,
ಎಂ.ಎಸ್ಸಿ., ಎಲ್.ಎಲ್.ಬಿ.

೧೬. ಬೆಳಕು-ಟಿ. ಎಸ್. ಸುಬ್ಬರಾಯ, ಎಂ.ಎಸ್ಸಿ.

೧೭. ಕರ್ನಾಟಕ ಕಾದಂಬರಿ-ವಿ. ಸೀತಾರಾಮಯ್ಯ, ಎಂ.ಎ.

---

ಸೋಲ್ ಏಜೆಂಟ್ :

ಎಂ. ಆರ್. ಲಕ್ಷ್ಮೀನಾರಾಯಣ,

ಬುಕ್‌ಸೆಲರ್, ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್, ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೩೮

# ಸುಭಾಷಿತ ಸಂಗ್ರಹಗಳು

ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ
ಮೈಸೂರು
೧೯೪೨

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚು ವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸೆಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು;

ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು, **ಇ. ಜಿ. ಮೆಕಾಲ್ಪೈನ್**

ತಾ|| ೨೪-೪-೧೯೪೨. ವೈಸ್-ಛಾನ್ಸೆಲರ್

# ಮೊದಲ ಮಾತು

ಕಳೆದ ನವೆಂಬರ್ ತಿಂಗಳಿನಲ್ಲಿ ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದ ಪರವಾಗಿ, ನಾನು ಮಂಡ್ಯದಲ್ಲಿ ಕೊಟ್ಟ "ಸಂಸ್ಕೃತದಲ್ಲಿ ಸುಭಾಷಿತ ಸಂಗ್ರಹಗಳು" ಎಂಬ ಪ್ರಚಾರೋಪನ್ಯಾಸವು ಈ ಪುಸ್ತಕದಲ್ಲಿ ಪ್ರಬಂಧರೂಪವನ್ನು ತಾಳಿದೆ. ಇದಕ್ಕೆ ಶ್ರೀಮಾನ್ ಜಿ. ಹನುಮಂತರಾವ್ ಮತ್ತು ಶ್ರೀಮಾನ್ ಸಿ. ರಂಗಾಚಾರ್ ಅವರ ಅಭಿಮಾನ ವಿಶ್ವಾಸಗಳು ಕಾರಣ. ಇದರ ಮೂಲಪ್ರತಿಯನ್ನು ಪರಿಶೀಲಿಸಿ ಅನೇಕ ಉಪಯುಕ್ತವಾದ ಸಲಹೆಗಳನ್ನಿತ್ತು ಸಹಾಯಮಾಡಿದವರು ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಮತ್ತು ಶ್ರೀಮಾನ್ ಎಚ್. ಎಲ್. ಹರಿಯಪ್ಪನವರು. ಇವರಿಗೂ ಈ ಪುಸ್ತಕದಲ್ಲಿರುವ ಕೆಲವು ಉತ್ತಮವಾದ ಸುಭಾಷಿತಗಳ ಪರಿಚಯವನ್ನು ನನಗೆ ಮೊದಲು ಮಾಡಿಕೊಟ್ಟ ನನ್ನ ವಿದ್ಯಾಗುರುಗಳಾದ ಪ್ರೊಫೆಸರ್ ಸಿ. ಆರ್. ನರಸಿಂಹಶಾಸ್ತ್ರಿಗಳವರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

**ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ**

## ಇದರಲ್ಲಿ ಉಪಯೋಗಿಸಿರುವ ಸುಭಾಷಿತ ಗ್ರಂಥಗಳ ಸಂಕ್ಷೇಪ ಚಿಹ್ನೆಗಳು

| | |
|---|---|
| ಕ. ವ. ಸ. | ಕವೀನ್ದ್ರವಚನಸಮುಚ್ಚಯ |
| ಸ. ಕ. | ಸದುಕ್ತಿಕರ್ಣಾಮೃತ |
| ಸೂ. ಮು. | ಸೂಕ್ತಿಮುಕ್ತಾವಳಿ |
| ಶಾ. ಪ. | ಶಾರ್ಙ್ಗಧರಪದ್ಧತಿ |
| ಸು. ವ. | ಸುಭಾಷಿತಾವಳಿ |
| ಸು. ರ. ಭಾ. | ಸುಭಾಷಿತರತ್ನಭಾಂಡಾಗಾರ |

## ವಿಷಯಾನುಕ್ರಮಣಿಕೆ

**ಮಧುರಂ ಮಧು ತಸ್ಮಾಚ್ಚ ಸುಧಾ ತಸ್ಯಾಃ ಕವೇರ್ವಚಃ**

(ಚಂದ್ರಾಲೋಕ)

ಜೇನುತುಪ್ಪ ಸಿಹಿ, ಅದಕ್ಕಿಂತ ಸಿಹಿ ಅಮೃತ, ಅದನ್ನೂ ಮೀರಿಸಿದ್ದು ಕವಿಯ ವಾಕ್ಕು.

**ತೇ ಸಜ್ಜನಾಃ ಸುಕವಿಶಾಖಿಕವಿತ್ವಪುಷ್ಪಾ-**
**ಣ್ಯಾದಾಯ ಗುಂಫಿತವತಃ ಸುಗುಣೈರ್ಮಮೈತತ್ ।**
**ಸಂಧಾರಯಂತು ಕುಸುಮೋಜ್ಜ್ವಲಹಾರರೂಪಂ**
**ಕಂಠೇ ಸುಭಾಷಿತಮುಪಾಸ್ತಸಮಸ್ತದೋಷಂ ॥**

(ಶಾರ್ಙ್ಗಧರ)

ಸತ್ಕವಿಗಳೆಂಬ ವೃಕ್ಷಗಳಿಂದ ಕವಿತ್ವಕುಸುಮಗಳನ್ನು ಆಯ್ದು ಈ ನನ್ನ ವರ್ಗೀಕರಣಗುಣದಿಂದ ಮಾಲೆಯನ್ನು ರಚಿಸಿದ್ದೇನೆ. ದೋಷರಹಿತವಾದ, ಉಜ್ವಲಿಸುವ ಪುಷ್ಪಹಾರದಂತಿರುವ ಈ ಸುಭಾಷಿತವನ್ನು ಸಜ್ಜನರು ಕಂಠದಲ್ಲಿ ಧರಿಸಲಿ.

# ಸುಭಾಷಿತ ಸಂಗ್ರಹಗಳು

## ೧. ಸುಭಾಷಿತಗಳ ಹುಟ್ಟು ಮತ್ತು ಮಹತ್ವ

**“ ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾಪ್ಯಶ್ಮತಾಂ ಗತಾ ॥**
**ಸುಭಾಷಿತರಸಸ್ಯಾಗ್ರೇ ಸುಧಾ ಭೀತಾ ದಿವಂಗತಾ ॥ ”**

“ ಸುಭಾಷಿತದ ಸ್ವಾರಸ್ಯವನ್ನು ಕಂಡು ದ್ರಾಕ್ಷೆಯ ಮುಖ ಸಪ್ಪಗಾಯಿತು; ಸಕ್ಕರೆ ಕಲ್ಲಾಯಿತು; ಅಮೃತ ಹೆದರಿ ಸ್ವರ್ಗಕ್ಕೆ ಓಡಿತು.” ಎಂದು ಸುಭಾಷಿತದ ಮಹತ್ವವನ್ನು ಪ್ರಾಚೀನ ಕವಿಯೊಬ್ಬನು ಹಾಡಿದ್ದಾನೆ. ಸುಭಾಷಿತಗಳಿಗೆ ನಮ್ಮಲ್ಲಿ ಮೊದಲಿಂದಲೂ ಪ್ರಾಶಸ್ತ್ಯ ದೊರೆತಿದೆ. ಪ್ರಪಂಚದ ಅನುಭವಗಳಿಗೂ ರಾಗಭಾವಗಳಿಗೂ ಒಂದು ರೂಪುಗೊಟ್ಟು ಮಾನವ ಹೃದಯದಲ್ಲೇಳುವ ಅನಂತಮುಖವಾದ, ಆಶೆ, ಉತ್ಸಾಹ, ಸುಖ, ದುಃಖ, ಕ್ರೋಧ, ವ್ಯಥೆ, ಪ್ರೇಮ ಮೊದಲಾದುವುಗಳಿಗೆ ಮರುದನಿಗೊಡುವಂತಹ ಸುಭಾಷಿತಗಳು ಯಾರ ಮನಸ್ಸಿಗೆ ತಾನೇ ಸಂತೋಷವನ್ನುಂಟುಮಾಡುವುದಿಲ್ಲ? ಆದುದರಿಂದಲೇ ಮೊದಲಿನಿಂದಲೂ ಸುಭಾಷಿತಗೀತಗಳಿಗೆ ಸಂತೋಷಸಮಾರಂಭಗಳಲ್ಲಿ, ವಿದ್ವದ್ಗೋಷ್ಠಿಗಳಲ್ಲಿ, ರಾಜಾಸ್ಥಾನಗಳಲ್ಲಿ ಪ್ರಾಮುಖ್ಯ ದೊರೆಯಿತು. ಸುಭಾಷಿತಪಠನವು ಉಪಚಾರಕ್ರಮದ ಒಂದು ಅಂಗವಾಗಿ ಪರಿಣಮಿಸಿತು. ಕಾದಂಬರಿಯು ತನ್ನ ಆಸ್ಥಾನಕ್ಕೆ ಬಂದ ಚಂದ್ರಾಪೀಡನನ್ನು ಸತ್ಕರಿಸಲು, ಸುಭಾಷಿತಗಳನ್ನು ರಾಗಸಹಿತವಾಗಿ ರಸವತ್ತಾಗಿ ಹಾಡಬಲ್ಲ ಕನ್ನಿಕೆಯರನ್ನು ಕಳುಹಿದಳೆಂದು ಬಾಣಕವಿಯು ವರ್ಣಿಸಿದ್ದಾನೆ. ಅಂದಿನಿಂದ ಇಂದಿನವರೆಗೂ ಈ ಸುಭಾಷಿತಗಳು ಪ್ರಪಂಚದ ವ್ಯವಹಾರದಲ್ಲಿಯು,

ಮಾನವ ಸಹಜವಾದ ರಾಗಭಾವಗಳ ಪ್ರಭಾವಕ್ಕೆ ಒಳಗಾಗಿ ರುವ ಎಲ್ಲರ ಮನಸ್ಸಿಗೂ ಸಂತೋಷವನ್ನುಂಟುಮಾಡಿವೆ ಯೆನ್ನಬಹುದು.

"ಸುಭಾಷಿತ" ವೆಂದರೆ ಒಳ್ಳೆಯ ಮಾತು ಎಂದರ್ಥ. ಈ ಮಾತು ಯಾವುದಾದರೂ ಆಗಬಹುದು. ಒಂದು ವಸ್ತುವನ್ನೊ ಒಂದು ವ್ಯಕ್ತಿಯನ್ನೊ ವರ್ಣಿಸಿರಬಹುದು, ಒಂದು ಸನ್ನಿವೇಶ ವನ್ನು ಚಿತ್ರಿಸಿರಬಹುದು: ಒಂದು ಭಾವವನ್ನು ವ್ಯಕ್ತಪಡಿಸಿರ ಬಹುದು. ಅಷ್ಟೇ ಅಲ್ಲ, ಆ ಮಾತು, ಪ್ರಪಂಚದ ಅನುಭವ ವನ್ನು ಒಂದು ರೀತಿಯಲ್ಲಿ ಸೂಚಿಸುವ ವಿವೇಕ ವಾಕ್ಯವಾಗ ಬಹುದು. ಇವೆಲ್ಲವೂ ಸುಭಾಷಿತವೆನಿಸಿಕೊಳ್ಳುತ್ತವೆ. ಇದನ್ನು ಸೂಕ್ತಿ, ಸದುಕ್ತಿ, ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಇಂತಹ ಮಾತು ಸಾಮಾನ್ಯವಾಗಿ ಪದ್ಯರೂಪದಲ್ಲಿರಬೇಕು. ಹೇಳುವ ವಿಷಯವೆಲ್ಲವೂ ನಾಲ್ಕುಪಾದಗಳಲ್ಲಿ ಮುಗಿಯಬೇಕು. ಒಂದೊಂದು ಪದ್ಯವೂ ಒಂದೊಂದು ಸಂಪೂರ್ಣವಾದ ಚಿತ್ರ ವನ್ನು ನಮಗೆ ಕೊಡಬೇಕು. ಇಂತಹ ಪದ್ಯಗಳು ಪರಂಪರೆಯಾಗಿ ಬಂದು ಜನಗಳ ಬಳಕೆಯಲ್ಲಿರಬಹುದು; ಅಥವಾ ಕಾವ್ಯ, ನಾಟಕ ಮೊದಲಾದ ಗ್ರಂಥಗಳಿಂದ ತೆಗೆದುಕೊಂಡುವಾಗಿರಬಹುದು. ಒಂದು ವಸ್ತುವನ್ನೋ ಒಂದು ಕತೆಯನ್ನೋ ವರ್ಣಿಸುವ ಕಾವ್ಯ ದಿಂದ ಇಂತಹ ಪದ್ಯವನ್ನು ಆರಿಸಿಕೊಂಡರೂ, ಹಾಗೆ ಆರಿಸಿದ ಪದ್ಯ ಬೇರೆ ಯಾವುದರ ಸಹಾಯವೂ ಇಲ್ಲದೆ, ಓದುಗರ ಮುಂದೆ ಒಂದು ಪೂರ್ಣವಾದ ಚಿತ್ರವನ್ನು ರೂಪಿಸಬೇಕು. ಹೀಗಿರುವ ಸ್ವತಂತ್ರವಾದ ಪದ್ಯಗಳನ್ನು ಸುಭಾಷಿತಗಳೆಂದು ಕರೆಯುತ್ತಾರೆ.

ಸಂಸ್ಕೃತದಲ್ಲಿ ಪ್ರಾಚೀನ ಸಂಗ್ರಹಗಳೆಂದರೆ ಇಂತಹ ಸುಭಾಷಿತ ಸಂಗ್ರಹಗಳೇ ಹೊರತು, ಸಾಹಿತ್ಯದ ಬೇರೆ ಬೇರೆ

ಕಾವ್ಯಭಾಗಗಳನ್ನು ಕೊಟ್ಟಿರುವುವಲ್ಲ. ಕಾವ್ಯದ ವಿಸ್ತಾರವಾದ ಭಾಗಗಳನ್ನು ಉದ್ಧರಿಸಿಕೊಟ್ಟಿರುವ ಸಂಗ್ರಹಗಳು ಈಚಿನ ವರೆಗೂ ಸಂಸ್ಕೃತದಲ್ಲಿ ಇರಲಿಲ್ಲವೆನ್ನಬಹುದು. ಇಂತಹ ಸುಭಾಷಿತಗಳನ್ನು ಆರಿಸಿ ಒಟ್ಟುಗೂಡಿಸಿರುವ ಗ್ರಂಥಗಳು ಸಂಸ್ಕೃತದಲ್ಲಿ ಹತ್ತಾರಿವೆ.

ಸಂಗ್ರಹ ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಂತೂ ಬೇಕಾದಷ್ಟಿವೆ. ಒಂದು ದೇಶದ ಸಾಹಿತ್ಯದಲ್ಲಿ ಮುಖ್ಯವಾಗಿ ಅಥವಾ ಸ್ವಾರಸ್ಯವಾಗಿ ಕಂಡುಬಂದ ಭಾಗಗಳನ್ನು ಒಂದು ಕಡೆ ಒಟ್ಟುಗೂಡಿಸಿ ಓದುಗರ ಮುಂದಿಡಬೇಕೆಂಬುದೇ ಸಂಗ್ರಹಗಳ ಕೆಲಸಕ್ಕೆ ಕೈಹಾಕಿದವರ ಆಶೆ. ಇಂಗ್ಲಿಷಿನಲ್ಲಿ ಹೀಗೆ ಉತ್ತಮವಾದ ಸಾಹಿತ್ಯಭಾಗಗಳನ್ನು ಆರಿಸಿ ಕೊಡುವಾಗ ಒಬ್ಬೊಬ್ಬರು ಒಂದೊಂದು ಮಾರ್ಗವನ್ನನುಸರಿಸಿದ್ದಾರೆ. ಕೆಲವರು ಯಾವುದಾದರೂ ಒಂದುಕಾಲಕ್ಕೆ ಸೇರಿದ ಕವಿಗಳೆಲ್ಲರ ಲೇಖನ ರಾಶಿಯಿಂದ ಸ್ವಾರಸ್ಯವಾದ ಭಾಗಗಳನ್ನು ತೆಗೆದುಕೊಟ್ಟಿದ್ದಾರೆ. ಕಾಲನಿಯಮವಿಲ್ಲದೆ, ಒಂದು ವಿಷಯಕ್ಕೆ ಸಂಬಂಧಿಸಿದಂತೆ ಕವಿಗಳು ಆಗಾಗ ಹಾಡಿರುವ ಪದ್ಯಗಳನ್ನು ಇನ್ನುಕೆಲವರು ಸಂಗ್ರಹಿಸಿದ್ದಾರೆ. ಮತ್ತೆಕೆಲವರು ಯಾವುದೋ ನಿಯಮಿತ ವಾದ ಕೆಲವು ವರ್ಷಗಳ ಅಥವಾ ಶತಮಾನಗಳಲ್ಲಿನ ಒಂದು ದೇಶದ ಸಾಹಿತ್ಯವು ಹೇಗೆ ಬೆಳೆಯುತ್ತ ಬಂದಿದೆಯೆಂಬುದನ್ನು ತೋರಿಸುವುದಕ್ಕಾಗಿ ಕಾಲಕ್ರಮವನ್ನು ಅನುಸರಿಸಿ ಆ ಸಾಹಿತ್ಯದಲ್ಲಿನ ಉತ್ತಮಭಾಗಗಳನ್ನು ಎತ್ತಿಕೊಟ್ಟಿದ್ದಾರೆ. ಅಲ್ಲದೆ ಕೆಲವು ಮಹಾಸಮಾರಂಭಗಳ ಕಾಲಕ್ಕೆ ಅಥವಾ ಒಬ್ಬ ದೊರೆಯ ಆಡಳಿತಕಾಲಕ್ಕೆ ಸಂಬಂಧಿಸುವ ಸಾಹಿತ್ಯ ಭಾಗಗಳನ್ನು ಇನ್ನಿತರರು ಆರಿಸಿಕೊಟ್ಟಿದ್ದಾರೆ. ಹೀಗೆ ಸಂಗ್ರ

ಹಿಸಿರುವ ಇಂಗ್ಲಿಷ್ ಗ್ರಂಥಗಳಲ್ಲಿ ಪದ್ಯ ಮತ್ತು ಗದ್ಯಭಾಗ ಗಳೆರಡೂ ಸೇರಿವೆ. ಆದರೆ ಸಂಸ್ಕೃತ ಸುಭಾಷಿತ ಸಂಗ್ರಹಗಳಲ್ಲಿ ಗದ್ಯಭಾಗವು ಸೇರಿಲ್ಲ. ಇವು ಯಾವ ಕಾಲನಿಯವನ್ನೂ ಅನು ಸರಿಸದೆ ಸಾಹಿತ್ಯದಲ್ಲಿ ಉತ್ತಮವಾದುದೆಂದು ಕಂಡುಬಂದ ಕೆಲವು ಪದ್ಯಗಳ ಸಂಗ್ರಹಗಳೆನ್ನಬಹುದು. ಇದರ ಜತೆಗೆ ಸಂಸ್ಕೃತ ಸುಭಾಷಿತಗಳಲ್ಲಿ ಇನ್ನೊಂದು ವಿಶೇಷ ಗುಣವಿದೆ. ಈ ಪದ್ಯಗಳು ಒಂದೊಂದೂ ಪೂರ್ಣ ಕವಿತೆ. ಈ ಕವಿತೆಗಳು ಸ್ವಾರಸ್ಯವಾಗಿರುವುವಲ್ಲದೆ ಅವು " ಸೂಕ್ತಿ " (ಒಳ್ಳೆಯ ಮಾತು) ಗಳೂ ಹೌದು. ಇದರಲ್ಲಿನ ಪ್ರತಿಯೊಂದು ಪದ್ಯವೂ ಸ್ವತಂತ್ರ ವಾದ ಒಂದು ಗೀತೆ. ಸಂಸ್ಕೃತ ಸಂಗ್ರಹಗಳಲ್ಲಿ ಸ್ವತಂತ್ರವಾದ ಭಾವಗೀತೆಗಳೇ ಹೆಚ್ಚು. ಇವುಗಳನ್ನು 'ಮುಕ್ತಕ' ಗಳೆಂದೂ ಕರೆಯಬಹುದು.

ಈ ಸುಭಾಷಿತಸಂಗ್ರಹಗಳಲ್ಲಿ ನಮಗೆ ದೊರೆಯುವ ಪದ್ಯಗಳು ಒಂದು ವಿಷಯ, ಒಂದು ಸನ್ನಿವೇಶ, ಒಂದು ರಸಕ್ಕೆ ಸಂಬಂಧ ಪಟ್ಟುವಲ್ಲ. ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಮೇಲೂ ಕವಿಗಳು ಹಾಡಿದ್ದಾರೆ. ಅಂತಹ ಕವಿತೆ ಇದರಲ್ಲಿ ಸಂಗೃಹೀತವಾಗಿದೆ. ಈ ಸಂಗ್ರಹಗಳಲ್ಲಿ ಎರಡು ವಿಧವಾದ ಕವಿತೆ ನಮಗೆ ಕಾಣುತ್ತದೆ. ೧. ಜೀವನದ ಅನುಭವವನ್ನು ಚೆನ್ನಾಗಿ ಅರಿತು, ಅದರ ಸತ್ಯವನ್ನು ಬಹು ಚಮತ್ಕಾರವಾದ ರೀತಿಯಲ್ಲಿ ಕೇಳುವವರ ಮನಸ್ಸಿಗೆ ನೇರವಾಗಿ ಹಿಡಿದು ಅವರ ಮನಸ್ಸಿನಲ್ಲಿ ಬಹುಕಾಲ ನಿಲ್ಲುವಂತೆ ಸಂಕ್ಷಿಪ್ತವಾಗಿ ಹೇಳಿರುವ ವಿವೇಕವಾಕ್ಯಗಳು. ೨. ಮಾನವಹೃದಯದಲ್ಲಿ ಅನಂತಮುಖ ವಾಗಿ ಹುಟ್ಟುವ ಭಾವಗಳಿಗೆ ರೂಪುಗೊಟ್ಟಿರುವ ಗೀತೆಗಳು.

ಈ ಸುಭಾಷಿತಗಳ ಕವಿಗಳು ತಮ್ಮ ಅನುಭವವನ್ನು

ಕೇವಲ ಕೆಲವು ಮಾತುಗಳಲ್ಲಿಯೇ ಹೊರಗೆಡಹಲು ಪ್ರಯತ್ನಿ ಸಿದ್ದಾರೆ. ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನೇ ಸನ್ನಿವೇಶ ಗಳನ್ನೇ ತೆಗೆದುಕೊಂಡು ಜನಕ್ಕೆ ಅನ್ವಯಿಸುವ ರೀತಿಯಲ್ಲಿಯೇ ಅವರಾಡಿದ್ದರೂ, ಅದರ ಸತ್ಯ ಇಡೀ ಪ್ರಪಂಚಕ್ಕೇ ಸೇರು ವಂತಿರುತ್ತದೆ. ವಿಷಯ ಮತ್ತು ಸನ್ನಿವೇಶಗಳು ನಮಗೆ ಬಳಕೆ ಯಾದುವುಗಳಾದರೂ ಅವರ ಉಕ್ತಿಯ ಚಮತ್ಕಾರದಿಂದ ಅವರ ಅನುಭವಗಳೂ ಅವರ ವರ್ಣನೆಯೂ ಒಂದು ಹೊಸ ರೂಪನ್ನೂ ಒಂದು ಸಂಸ್ಕಾರವನ್ನೂ ಪಡೆದಿರುತ್ತವೆ. ಈ ಪದ್ಯ ಗಳು ಕೇವಲ ಅಪೂರ್ವವಾದ ಅನುಭವವನ್ನು ವ್ಯಕ್ತಪಡಿಸುವ ಬರಿಯ ವಾಕ್ಯಗಳು ಮಾತ್ರವಲ್ಲ; ಅವು ಉತ್ತಮ ಸಾಹಿತ್ಯವೂ ಹೌದು.

ಎರಡನೆಯ ಗುಂಪಿಗೆ ಸೇರಿದುವು ಭಾವಗೀತೆಗಳು. ಇವು ಒಮ್ಮೊಮ್ಮೆ ಒಂದೊಂದು ವಿಧವಾಗಿ, ರತ್ನದಂತೆ ಪ್ರಕಾಶಮಾನ ವಾಗಿ, ಸಮುದ್ರದಂತೆ ಗಂಭೀರವಾಗಿ, ಮಾನವ ಜೀವನದ ಎಲ್ಲ ಭಾಗಗಳನ್ನೂ ಬೆಳಗಿ ಮಾನವ ಹೃದಯದಲ್ಲಿ ಉದ್ಭವಿ ಸುವ ಅನಂತಾನಂತ ಭಾವಗಳನ್ನು ಮನೋಹರವಾದ ರೀತಿ ಯಲ್ಲಿ ಚಿತ್ರಿಸುತ್ತವೆ. ಹೀಗೆ ಮಾನವ ಹೃದಯಕ್ಕೆ ಸೇರುವ ಆಳವಾದ ಭಾವಗಳನ್ನು ಸ್ವಾರಸ್ಯವಾದ ರೀತಿಯಲ್ಲಿ ಅದರಲ್ಲೂ ಸಂಕ್ಷಿಪ್ತವಾದ ಮಾತಿನಲ್ಲಿ ಚಿತ್ರಿಸಬೇಕಾದರೆ ಕವಿಗೆ ಅಪೂರ್ವ ವಾದ ಶಕ್ತಿಯಿರಬೇಕು, ಅದ್ಭುತವಾದ ಪ್ರತಿಭೆಯಿರಬೇಕು. ಈ ಭಾವಗೀತೆಗಳು ಓದುಗರ ಮನಸ್ಸನ್ನು ಸೆಳೆದು ಅವರ ಹೃದಯಕ್ಕೆ ಸಂತೋಷವನ್ನು ಕೊಡುತ್ತವೆ. ಇವುಗಳ ಕರ್ತೃಗಳು ಮಾಡಿರುವ ಕೆಲಸ ಅಪೂರ್ವವಾದ ಕೆತ್ತನೆಯ ಕೆಲಸದಂತೆ. ಈ ಪದ್ಯಗಳಲ್ಲಿ ವರ್ಣನೆಗೆ ಮಾರ್ಗವಿಲ್ಲ; ಹೆಚ್ಚು ಪದಗಳ

ಉಪಯೋಗಕ್ಕೆ ಅವಕಾಶವೇ ಇಲ್ಲ. ಇಲ್ಲಿ ಮಾತಿನ ಆವರಣ ಚಿಕ್ಕದು, ಚಿತ್ರ ಬಲುದೊಡ್ಡದು. ಸನ್ನಿವೇಶ ಮತ್ತು ಭಾವಕ್ಕೆ ಹೆಚ್ಚು ಪ್ರಾಧಾನ್ಯವೇ ಹೊರತು ವಿವರಣೆಗಲ್ಲ. ಹೇಳುವ ಮಾತಿಗಿಂತ ಊಹೆಗೇ ಧ್ವನಿಗೇ ಪ್ರಾಮುಖ್ಯ ಹೆಚ್ಚು.

ಈ ಸಂಗ್ರಹಗಳಲ್ಲಿ ಕಂಡುಬರುವ ಪದ್ಯಗಳು ಇಂತಹ ಕವಿತೆಗಳು. ಸಂಗ್ರಹಕಾರರು ಇಂತಹ ಕವಿತೆಯನ್ನು ಪ್ರಾಚೀನವಾದ ಕಾವ್ಯ ನಾಟಕ ಅಲಂಕಾರಾದಿಗ್ರಂಥಗಳಿಂದ ಆರಿಸಿದ್ದಾರೆ; ಅದರ ಜತೆಗೆ, ಜನತೆಯಲ್ಲಿ ಅದರಲ್ಲೂ ಸುಸಂಸ್ಕೃತರ ಸಂಭಾಷಣೆ ಮೊದಲಾದುವುಗಳಲ್ಲಿ ರೂಢಿಯಲ್ಲಿದ್ದು ಪರಂಪರೆಯಾಗಿ ತಾವು ಕೇಳಿ ತಿಳಿದ ಪ್ರಾಸಂಗಿಕವಾದ ಪದ್ಯಗಳನ್ನೂ ಸೇರಿಸಿದ್ದಾರೆ. ಈ ತೆರನಾದ ಸಂಗ್ರಹ ಗ್ರಂಥಗಳಿಂದ ನಮಗೆ ಎರಡು ವಿಧವಾದ ಪ್ರಯೋಜನವಾಗುತ್ತದೆಯೆನ್ನಬಹುದು. ಇಲ್ಲಿಯ ಪದ್ಯಗಳು ನಮ್ಮ ಸಾಹಿತ್ಯದಲ್ಲಿ ಪ್ರಾಚೀನ ಕವಿಗಳು ಸತ್ಯ ಸೌಂದರ್ಯಗಳನ್ನು ಹೇಗೆ ಚಿತ್ರಿಸಿದ್ದಾರೆಂಬುದನ್ನು ತಿಳಿಯಲು ಮತ್ತು ಅವರ ಕಾವ್ಯದ ಸ್ವಾರಸ್ಯವನ್ನು ಸವಿದು ಅದರ ಯೋಗ್ಯತೆಯನ್ನು ಅರಿಯಲು ಸಹಾಯಮಾಡುತ್ತವೆ. ಸಂಸ್ಕೃತಸಾಹಿತ್ಯದಲ್ಲಿ ಅನೇಕ ಕಾರಣಗಳಿಂದ, ಸಾವಿರಾರು ಗ್ರಂಥಗಳು ಲೋಪವಾಗಿವೆ. ಈ ಸಂಗ್ರಹಗಳಲ್ಲಿ, ಹಾಗೆ ನಮಗೆ ದೊರೆಯದಿರುವ ಗ್ರಂಥಗಳಿಂದ ನಮ್ಮ ನೋಟಕ್ಕೆ ಬೀಳದಿರುವ ನಿಜವಾದ ಕವಿಗಳು ಕೆಲವರ ಪದ್ಯಗಳನ್ನು ಉದ್ಧಾರಮಾಡಿ ಕೊಟ್ಟಿದ್ದಾರೆ. ಈ ಸಂಗ್ರಹಗಳಿಂದ ಆ ಕವಿಗಳ ಕೆಲವು ಪದ್ಯಗಳ ಸ್ವಾರಸ್ಯವನ್ನಾದರೂ ಅನುಭವಿಸಲು ಅವಕಾಶ ದೊರೆತಿದೆ. ಇದರ ಜತೆಗೆ ಕವಿಯ ಮತ್ತು ಕಾವ್ಯದ ಕಾಲದೇಶಗಳನ್ನು ನಿಷ್ಕರ್ಷೆಮಾಡುವುದಕ್ಕೆ ಈ ಸಂಗ್ರಹ ಗ್ರಂಥಗಳು ಒಂದುವಿಧ

ವಾಗಿ ಸಹಾಯ ಮಾಡುತ್ತವೆಯೆನ್ನಬಹುದು.

ಒಂದು ಕಾವ್ಯವನ್ನೋ ಒಂದು ಗ್ರಂಥವನ್ನೋ ಓದಿದಾಗ ಅದರಲ್ಲಿಯ ಬಹು ಮುಖ್ಯವಾದ ಮತ್ತು ಸ್ವಾರಸ್ಯವಾದ ಭಾಗ ವನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂಬ ಆಶೆ ಹುಟ್ಟುತ್ತದೆ. ಹಾಗೆಯೇ ನೆನಪಿನಲ್ಲಿಟ್ಟುಕೊಳ್ಳಬೇಕೆನ್ನುವ ಪದ್ಯಗಳನ್ನೂ ತಾನು ಕೇಳಿದ ಸ್ವಾರಸ್ಯವಾದ ಪ್ರಾಸಂಗಿಕೋಕ್ತಿಗಳನ್ನೂ ಸಂಗ್ರ ಹಿಸಿಡಬೇಕೆಂಬ ಬಯಕೆಯೂ ಉಂಟಾಗುತ್ತದೆ. ಆಗ ಅವನು ಸಂಗ್ರಹದ ಕೆಲಸಕ್ಕೆ ಕೈಹಾಕುತ್ತಾನೆ. ಹೀಗೆ ಸಂಗ್ರಹದ ಕೆಲ ಸಕ್ಕೆ ಕೈಹಾಕಿದವನದು ಬಹು ಕಷ್ಟದ ಕೆಲಸ. ಆ ಕಾವ್ಯ ಬಹು ಸ್ವಾರಸ್ಯವಾದುದಾದರೆ, ಅದರಲ್ಲಿ ಯಾವ ಪದ್ಯವನ್ನು ಬಿಡು ವುದು, ಯಾವುದನ್ನು ಆರಿಸುವುದು ? ಪ್ರತಿಯೊಬ್ಬ ಸಂಗ್ರಹ ಕಾರನೂ ತನ್ನ ಅಭಿರುಚಿಗೆ ಅನುಗುಣವಾಗಿ ಪದ್ಯಗಳನ್ನು ಆರಿ ಸಿದ್ದರೂ ಈ ಸಮಸ್ಯೆಗೆ ಸಿಕ್ಕದೆ ಇಲ್ಲ. ಒಂದೇ ವಸ್ತುವನ್ನು, ಒಂದೇ ಸನ್ನಿವೇಶವನ್ನು ಒಬ್ಬೊಬ್ಬ ಕವಿ ಒಂದೊಂದು ವಿಧ ವಾಗಿ ಚಿತ್ರಿಸಿರುತ್ತಾನೆ. ಒಂದು ದೇಶದವನಿಗೂ ಮತ್ತೊಂದು ದೇಶದವನಿಗೂ, ಒಂದು ಕಾಲದ ಕವಿಗೂ ಮತ್ತೊಂದು ಕಾಲದ ಕವಿಗೂ ವ್ಯತ್ಯಾಸವಿದೆ. ಜೀವನದ ವಿಷಯದಲ್ಲಿ ಅವರ ದೃಷ್ಟಿಪಥ ಬೇರೆ ಬೇರೆಯಾಗಿರುತ್ತದೆ. ಅವರು ಕಾಣುವ ಚಿತ್ರಗಳು ಭಿನ್ನ ಭಿನ್ನವಾಗಿರುತ್ತವೆ. ಒಂದು ದೇಶ ಸಮೃದ್ಧ ವಾಗಿ, ಆ ದೇಶದ ಜನರು ತಲೆಯೆತ್ತಿಕೊಂಡು, ಆಶಾವಾದಿಗ ಳಾಗಿ ವೈಭವದಿಂದ ನಡೆಯುತ್ತಿರುವ ಕಾಲದ ಕವಿಯ ವಾಣಿಗೂ ತುಮುಲಕ್ಕೆ ಸಿಕ್ಕಿ ಬೆಳಕು ಕಾಣದೆ ಕತ್ತಲೆಯಲ್ಲಿ ಒದ್ದಾಡುತ್ತಾ ದಾಸ್ಯದಲ್ಲಿರುವವರ ನಡುವೆ ಜೀವನವನ್ನು ಸವೆ ಸುವ ಕವಿಯ ಮಾತಿಗೂ ವ್ಯತ್ಯಾಸವಿದೆ. ಅತಿ ಪ್ರಾಚೀನ ಕವಿ

ಗಳ ಕಾವ್ಯಕ್ಕೂ, ವೈಜ್ಞಾನಿಕ ಮನೋವೃತ್ತಿಯಲ್ಲಿ ಮುಂದುವ
ರಿಯುತ್ತಿರುವ ಕಾಲದ ಕವಿಗಳ ಉಕ್ತಿಗೂ ಭೇದವಿದೆ. ಅವರು
ತಾವು ಕಂಡು ಅನುಭವಿಸಿದ ಜೀವನವನ್ನೂ ಜೀವನದ ಸನ್ನಿ
ವೇಶಗಳನ್ನೂ ದೈವದತ್ತವಾದ ಪ್ರತಿಭಾವಿಶೇಷದಿಂದ ತಮ್ಮದೇ
ಆದ ರೀತಿಯಲ್ಲಿ ಚಿತ್ರಿಸಲು ಪ್ರಯತ್ನಿಸುತ್ತಾರೆ. ಈ ಸುಭಾ
ಷಿತಗಳ ಸಂಗ್ರಹಗಳಲ್ಲಿ ಹೀಗೆ ಭಿನ್ನ ಭಿನ್ನ ಕಾಲದ ಭಿನ್ನ ಭಿನ್ನ
ದೃಷ್ಟಿಯ ಕವಿಗಳ ಪದ್ಯಗಳು ಅಡಕವಾಗಿವೆ.

ಸಂಗ್ರಹಕಾರರು ತಮ್ಮ ಮನಸ್ಸಿಗೆ ರುಚಿಸಿದ ಸ್ವಾರಸ್ಯವಾದ
ಸುಭಾಷಿತಗಳನ್ನು ಆರಿಸಿದ್ದರೂ ಅವುಗಳನ್ನು ಸಂಗ್ರಹಿಸು
ವಾಗ ಯಾವುದಾದರೂ ಕೆಲವು ನಿಯಮಗಳನ್ನು ಅನುಸರಿಸ
ಬೇಕು. ಇಲ್ಲವಾದರೆ ಅವರ ಕಾರ್ಯ ಬಹು ಕಷ್ಟತರವಾಗುವುದ
ಲ್ಲದೆ, ಅವರ ಸಂಗ್ರಹಗಳು ಜನಪ್ರಿಯವಾಗಲಾರವು. ಯಾವ
ಪದ್ಯ ಉತ್ತಮವಾದುದು, ಕವಿತೆಯೆಂದು ಕರೆಸಿಕೊಳ್ಳಲು ಅರ್ಹ
ವಾದುದು ಎಂಬುದನ್ನು ನಿಶ್ಚಯಿಸುವವನಿಗೆ ಸೌಂದರ್ಯದ
ಕಡೆ ಕಣ್ಣಿರಬೇಕು; ಸಾಹಿತ್ಯಜ್ಞಾನದಿಂದ ಅವನ ಹೃದಯ
ಸಂಸ್ಕಾರ ಪಡೆದಿರಬೇಕು. ಸಂಗ್ರಹಕಾರನು ಆರಿಸುವ ಪದ್ಯ
ಗಳು ಯಾವ ಕವಿಗೆ ಸೇರಿದುವೋ ಅಂತಹ ಕವಿಯ ಘನತೆಗೆ
ಅವು ತಕ್ಕಂತಿರಬೇಕು. ಆರಿಸಿದ ಪದ್ಯ ಕವಿಯ ಪ್ರತಿಭೆಯನ್ನು
ಪೂರ್ಣವಾಗಿ ಬೆಳಗುವಂತಿರಬೇಕು; ಅವನ ವ್ಯಕ್ತಿತ್ವವನ್ನು
ಪ್ರದರ್ಶಿಸಬೇಕು. ಆ ಪದ್ಯಗಳು ಅರೆಯಾಗಿರಬಾರದು. ಪದ್ಯ
ವನ್ನು ಓದಿದರೆ ಓದುಗನ ಮನಸ್ಸು ಸಂತೋಷಗೊಳ್ಳಬೇಕು.
ಒಂದು ಸುಂದರವಾದ ಚಿತ್ರ ಅವನ ಮನಸ್ಸಿನಲ್ಲಿ ಬಹುಕಾಲ ನಿಲ್ಲ
ಬೇಕು. ಇಂತಹ ಪದ್ಯಗಳೇ ಸಂಗ್ರಹಗಳಲ್ಲಿ ಸೇರಲು ಅರ್ಹ
ವಾದ ಪದ್ಯಗಳು. ಇವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಸಂ

ಸ್ಕೃತ ಸುಭಾಷಿತಗಳ ಸಂಗ್ರಹಕಾರರು ಪದ್ಯಗಳನ್ನು ಆರಿಸಿದ್ದಾರೆ. ಇಲ್ಲಿ ಕಂಡುಬರುವ ಪದ್ಯಗಳೆಲ್ಲವೂ ಪ್ರಖ್ಯಾತರಾದ ಕವಿಗಳವೇ ಅಲ್ಲ. ಆದರೆ ಇಲ್ಲಿಯ ಕವಿಗಳೆಲ್ಲರೂ ಸೌಂದರ್ಯ ಸಾಧನೆಯಲ್ಲಿ ಮಗ್ನರಾದವರು. ಅದರಲ್ಲಿ ಅವರು ಸಿದ್ಧಿಪಡೆಯದಿರಬಹುದು; ಆದರೆ ಅವರು ಮಾನವ ಹೃದಯದ ಭಾವಗಳನ್ನು ಸ್ವಾರಸ್ಯವಾದ ರೀತಿಯಲ್ಲಿ ವ್ಯಕ್ತಪಡಿಸಿ ಕೃತಾರ್ಥರಾಗಿದ್ದಾರೆ. ಇವರ ಕೃತಿಗಳನ್ನು ಓದಿದರೆ ಮನಸ್ಸಿಗೆ ಸಂತೋಷವಾಗುತ್ತದೆ; ನಮ್ಮ ವಿವೇಕ ಹೆಚ್ಚುತ್ತದೆ. ಇಲ್ಲಿಯ ಒಂದೊಂದು ಪದ್ಯವೂ ಒಂದೊಂದು ಆಣಿಮುತ್ತು.

ಇಂತಹ ಮುಕ್ತಕಗಳನ್ನು, ಸುಭಾಷಿತಗಳನ್ನು ಸಂಗ್ರಹ ಮಾಡಿರುವ ಗ್ರಂಥಗಳು ಸಂಸ್ಕೃತದಲ್ಲಿ ಅನೇಕವಾಗಿವೆ. ಪ್ರಪಂಚಸಾರವಿವೇಕ, ಪ್ರಾಸ್ತಾವಿಕ ಪದ್ಯಾವಳೀ, ಸಮಯೋಚಿತಪದ್ಯಮಾಲಿಕಾ, ಸೂಕ್ತಿರತ್ನಾಕರ, ಕವೀಂದ್ರವಚನಸಮುಚ್ಚಯ, ಸಾಹಿತ್ಯರತ್ನಮಂಜೂಷಾ, ಸುಭಾಷಿತರತ್ನಸಂದೋಹ, ಸುಭಾಷಿತಾವಳೀ, ಸುಭಾಷಿತರತ್ನಾಕರ, ಸುಭಾಷಿತಸಂಗ್ರಹ, ಸೂಕ್ತಿಮುಕ್ತಾವಳೀ, ಸಜ್ಜನಚಿತ್ತವಲ್ಲಭ, ಶಾರ್ಙ್ಗಧರಪದ್ಧತಿ, ಸದುಕ್ತಿಕರ್ಣಾಮೃತ, ಸಾಧೂಕ್ತಿಕರ್ಣಾಮೃತ, ಸೂಕ್ತಿರತ್ನಾವಳೀ, ರಸಾರ್ಣವ, ಸುಭಾಷಿತರತ್ನಭಾಂಡಾಗಾರ, ಕವಿಕರ್ಣಭೂಷಣ, ಸುಭಾಷಿತಕೌಸ್ತುಭ, ಸೂಕ್ತಿಸುಧಾಕರ, ಸುಭಾಷಿತಸುಧಾನಿಧಿ, ಪದ್ಯಾಮೃತತರಂಗಿಣೀ, ಕವಿಕೌಮುದೀ ಮೊದಲಾದ ಹತ್ತಾರು ಗ್ರಂಥಗಳಲ್ಲಿ ಸುಭಾಷಿತಗಳ ಸಂಗ್ರಹಗಳು ಅಡಕವಾಗಿವೆ. ಇವುಗಳ ಪೈಕಿ ಮುಖ್ಯವಾದ ಐದಾರು ಸಂಗ್ರಹ ಗ್ರಂಥಗಳ ಪರಿಚಯವನ್ನು ಮಾಡಿಕೊಟ್ಟು, ಆಮೇಲೆ ಅವುಗಳಿಂದ ಮಾನವ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನೂ ಭಾವಗಳನ್ನೂ

ಚಿತ್ರಿಸಿರುವ ಕೆಲವು ಪದ್ಯಗಳನ್ನು ಕೊಡಲಾಗುವುದು. ಇದರಿಂದ ಸಂಗ್ರಹಕಾರರು ಆರಿಸಿರುವ ಕೆಲವು ಪದ್ಯಗಳ ಸ್ವಾರಸ್ಯವು ತಿಳಿದು ಆ ಕವಿಗಳ ಪರಿಚಯವಾಗಲು ಅವಕಾಶ ದೊರೆತಂತಾಗುವುದು.

---

# ೨. ಸಂಗ್ರಹಗಳು

## ೧. ಕವೀಂದ್ರವಚನಸಮುಚ್ಚಯ

ಕವೀಂದ್ರವಚನ ಸಮುಚ್ಚಯವೆಂಬುದು ಇಂತಹ ಸುಭಾಷಿತಸಂಗ್ರಹ ಗ್ರಂಥಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದೆನ್ನಬಹುದು. ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳು ಮೊದಲು ಈ ಗ್ರಂಥದ ಮೂಲಪ್ರತಿಯನ್ನು ಕಂಡುಹಿಡಿದರು. ಅವರಿಗೆ ದೊರೆತ ಹಸ್ತಲಿಖಿತ ಪ್ರತಿಯಲ್ಲಿ ಗ್ರಂಥದ ಹೆಸರಾಗಲಿ ಅದರ ಸಂಗ್ರಹಕಾರನ ಹೆಸರಾಗಲಿ ಇರಲಿಲ್ಲ. ಆ ಪ್ರತಿಯಲ್ಲಿ ಮೊದಲು ಕಂಡುಬಂದ ಪದ್ಯವಿದು.

**ನಾನಾಕವೀಂದ್ರ ವಚನಾನಿ ಮನೋಹರಾಣಿ**
**ಸಂಖ್ಯಾವತಾಂ ಪರಮಕಂಠ ವಿಭೂಷಣಾನಿ ॥**
**ಆಕಂಪಕಾನಿ ಶಿರಸಶ್ಚ ಮಹಾಕವೀನಾಂ**
**ತೇಷಾಂ ಸಮುಚ್ಚಯಮನರ್ಘಮಹಂ ವಿಧಾಸ್ಯೇ ॥**[1]

---

[1] ಪಂಡಿತರಿಗೆ ಕಂಠಭೂಷಣವಾದ, ಮಹಾಕವಿಗಳನ್ನು ತಲೆದೂಗಿಸಬಲ್ಲ ಅನೇಕ ಕವೀಂದ್ರರ ಮನೋಹರವಾದ ವಚನಗಳನ್ನು ಇಲ್ಲಿ ಒಟ್ಟುಗೂಡಿಸುತ್ತೇನೆ.

ಇದು ಸಂಗ್ರಹಕಾರನ ಪದ್ಯ. ಈ ಪದ್ಯದಲ್ಲಿನ ಕೆಲವು ಪದಗಳಿಂದ ಗ್ರಂಥದ ಹೆಸರನ್ನು ಊಹಿಸಿ ಗ್ರಂಥಕ್ಕೆ ಕವೀಂದ್ರ ವಚನಸಮುಚ್ಚಯವೆಂಬ ಹೆಸರನ್ನು ಕೊಟ್ಟರು. ಇದನ್ನು ಸಿದ್ಧಮಾಡಿದವರು ಯಾರು ಎಂಬುದು ಗೊತ್ತಿಲ್ಲ.

ಈ ಸಂಗ್ರಹದಲ್ಲಿ ಹದಿನೆಂಟು ಪ್ರಕರಣಗಳಿವೆ.* ಮೊದಲನೆಯದು "ಸುಗತವ್ರಜ್ಯಾ" ಎಂಬ ಪ್ರಕರಣ. ಈ ಪ್ರಕರಣದಲ್ಲಿ ಅಶ್ವಘೋಷ, ವಸುಕ, ಅಪರಾಜಿತರಕ್ಷಿತ, ಶ್ರೀವರನಂದಿ, ವಸುಕಲ್ಪ, ಬಲ್ಲಣ, ಶ್ರೀಪಾಶವರ್ಮ, ಜಿತಾರಿನಂದಿ ಮತ್ತು ತ್ರಿಲೋಚನ ಎಂಬ ಕವಿಗಳ ಪದ್ಯಗಳಿವೆ. ಎರಡನೆಯದು ಬೋಧಿಸತ್ವರಲ್ಲಿ ಒಬ್ಬನಾದ ಅವಲೋಕಿತೇಶ್ವರನ ವರ್ಣನೆಗಾಗಿ ಮೀಸಲಾಗಿದೆ. ಇದರಲ್ಲಿರುವ ಪದ್ಯಗಳು ಪಂಡಿತಬುದ್ಧಾಕರಗುಪ್ತ ಮತ್ತು ರತ್ನಕೀರ್ತಿ ಇವರಿಗೆ ಸೇರಿದುವು. ಈ ಪ್ರಕರಣಗಳಲ್ಲಿನ ಕವಿಗಳೆಲ್ಲರೂ ಸುಪ್ರಸಿದ್ಧರು. ಅಶ್ವಘೋಷನು ಬುದ್ಧಚರಿತ ಮತ್ತು ಸೌಂದರನಂದ ಎಂಬ ಎರಡು ಬೌದ್ಧ

---

* ೧. ಸುಗತವ್ರಜ್ಯಾ
೨. ಲೋಕೇಶ್ವರವ್ರಜ್ಯಾ
೩. ಹರಿವ್ರಜ್ಯಾ
೪. ಸೂರ್ಯವ್ರಜ್ಯಾ
೫. ವಸಂತವ್ರಜ್ಯಾ
೬. ಗ್ರೀಷ್ಮವ್ರಜ್ಯಾ
೭. ಪ್ರಾವೃಟ್‌ವ್ರಜ್ಯಾ
೮. ಮದನವ್ರಜ್ಯಾ
೯. ವಯಃಸಂಧಿವ್ರಜ್ಯಾ
೧೦. ತರುಣೀವ್ರಜ್ಯಾ
೧೧. ಅನುರಾಗವ್ರಜ್ಯಾ
೧೨. ದೂತೀವಚನವ್ರಜ್ಯಾ
೧೩. ಸಂಭೋಗವ್ರಜ್ಯಾ
೧೪. ಸಮಾಪ್ತನಿಧುವನಚಿಹ್ನವ್ರಜ್ಯಾ
೧೫. ಮಾನಿನೀವ್ರಜ್ಯಾ
೧೬. ವಿರಹಿಣೀವ್ರಜ್ಯಾ
೧೭. ವಿರಹಿವ್ರಜ್ಯಾ
೧೮. ಅಸತೀವ್ರಜ್ಯಾ

ಈ ಸಂಗ್ರಹದಲ್ಲಿರುವ ಒಟ್ಟು ಪದ್ಯಗಳ ಸಂಖ್ಯೆ ೫೨೫.

ಮಹಾಕಾವ್ಯಗಳ ಕರ್ತೃ. ರತ್ನಾಕರನು ಅಪೋಹಸಿದ್ಧಿ ಎಂಬ ಗ್ರಂಥವನ್ನು ರಚಿಸಿದವನು. ಇತರ ಪ್ರಕರಣಗಳಲ್ಲಿಯೂ ಇವರಂತೆಯೇ ಮತ್ತು ಇವರಿಗಿಂತ ಹೆಚ್ಚಾಗಿ ಪ್ರಸಿದ್ಧರಾದ, ಕಾಲಿದಾಸ, ಬಾಣ, ಭವಭೂತಿ, ಶ್ರೀಹರ್ಷ, ವಾಕ್ಪತಿರಾಜ, ಮುರಾರಿ, ಅಮರುಕ ಮೊದಲಾದವರ ಪದ್ಯಗಳಿವೆ. ಈ ಕವಿಗಳೆಲ್ಲರೂ ಸಂಸ್ಕೃತಭಾಷೆಗೆ ಗೌರವ ತಂದವರು. ಇವರಷ್ಟು ಪ್ರಸಿದ್ಧರಲ್ಲದ ಸುಮಾರು ಎಂಭತ್ತು ಮಂದಿ ಇತರ ಕವಿಗಳ ಪದ್ಯಗಳೂ ಈ ಸಮುಚ್ಚಯದಲ್ಲಿ ಸೇರಿವೆ.

ಇದು ಕ್ರಿ. ಶ. ೧೧ನೆಯ ಶತಮಾನದಲ್ಲಿ ಸಂಗ್ರಹಿಸಿದ ಗ್ರಂಥ. ಪ್ರಾಯಶಃ ಬೌದ್ಧಕವಿಯೊಬ್ಬನು ಇದನ್ನು ಸಂಗ್ರಹಿಸಿರಬೇಕೆಂದು ಊಹಿಸಲು ಸಾಕಾದಷ್ಟು ಆಧಾರಗಳಿವೆ. ಇದರಲ್ಲಿಯ ಮೊದಲೆರಡು ಪ್ರಕರಣಗಳೂ ಬುದ್ಧನ ಮತ್ತು ಅವಲೋಕಿತೇಶ್ವರನ ಸ್ತೋತ್ರಕ್ಕೆ ಮುಡಿಪಾಗಿವೆ. ಕಾಳಿದಾಸ ಮೊದಲಾದ ಮಹಾಕವಿಗಳ ಪದ್ಯಗಳು ದೊರೆವುದು ಕೂಡ ಇನ್ನುಳಿದ ಪ್ರಕರಣಗಳಲ್ಲಿಯೇ.

ಈ ಸಂಗ್ರಹವು ಅಶ್ವಘೋಷನ ಬುದ್ಧಸ್ತೋತ್ರದಿಂದ ಆರಂಭವಾಗುತ್ತದೆ. ಮೊದಮೊದಲು ಬುದ್ಧನ ಶಕ್ತಿ, ದಯೆಗಳನ್ನು ವರ್ಣಿಸಿರುವ ಪದ್ಯಗಳು ದೊರೆಯುತ್ತವೆ. ಇವು ಬರಿಯ ವರ್ಣನೆಯ ಅಥವಾ ಸ್ತೋತ್ರದ ಪದ್ಯಗಳಲ್ಲ. ಅವುಗಳಲ್ಲಿ ಕವಿಯ ಚಮತ್ಕಾರ ಕಂಡುಬರುತ್ತದೆ, ಕಾವ್ಯರಸವಿದೆ.

ಬುದ್ಧನು ಕಾಮಾತೀತನಾಗಿ, ಜಗತ್ತಿನ ಮೋಹಪಾಶಕ್ಕೆ ಸಿಕ್ಕದೆ ಅವ್ಯಾಜಪ್ರೇಮದಿಂದ ಜಗದ ಬಾಳನ್ನು ತಿದ್ದಿ, ಪ್ರಪಂಚವನ್ನೇ ಉದ್ಧಾರಮಾಡಲು ನಿಂತ ಪವಿತ್ರಮೂರ್ತಿ. ಈತನು ತೃಷ್ಣೆಯಿಂದ ಕ್ಷೋಭೆಗೊಂಡ ಲೋಕಕ್ಕೆ ತನ್ನ ಧರ್ಮವಾಣಿಯು

ಅಮೃತಧಾರೆಯನ್ನೆರೆದು ಸಂತೈಸಿದ ಮಹಾನುಭಾವ. ಬುದ್ಧ ದೇವನ ಜೀವನದಲ್ಲಿ ಬಂದೊದಗಿದ ಒಂದು ದೊಡ್ಡ ತೊಡರೆಂದರೆ, ಆತನನ್ನು ಮೋಹಪಾಶಕ್ಕೆ ಸಿಲುಕಿಸಬೇಕೆಂದು ಮಾರನು ಮಾಡಿದ ಮಹಾಪ್ರಯತ್ನ, ಹೀಗೆ ಅವನನ್ನು ಪ್ರಪಂಚದ ಪಾಶಕ್ಕೆ ಸಿಲುಕಿಸಿ, ಗೆಲ್ಲುವುದಕ್ಕಾಗಿ ಮಾರನು ಮಾಡಿದ ಪ್ರಯತ್ನಗಳು ಬುದ್ಧನ ಚರಿತ್ರೆಯನ್ನು ವರ್ಣಿಸುವ ಗ್ರಂಥಗಳಲ್ಲಿ ವಿಶದವಾಗಿ ಚಿತ್ರಿತವಾಗಿವೆ. ಬುದ್ಧನು ಮಾರನಿಗೆ ಹೆದರಲಿಲ್ಲ. ಆವನ ಅನುಯಾಯಿಗಳಿಗೆ ಸೋಲಲಿಲ್ಲ. ಇದನ್ನು ಕವಿ ಕೆಲವು ಪದ್ಯಗಳಲ್ಲಿ ಅಜಂತ ಗುಹೆಗಳ ಚಿತ್ರಗಳನ್ನು ನೆನಪಿಗೆ ತರುವಂತೆ ವರ್ಣಿಸಿದ್ದಾನೆ.

ಮಾರನನ್ನು ಗೆದ್ದುದು ಬುದ್ಧನ ಜೀವನದಲ್ಲಿ ಒಂದು ಮಹಾಪ್ರಸಂಗವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇಂತಹ ಮಹಾಕಾರ್ಯವನ್ನು ಈಶ್ವರನು ಮಾಡಲಿಲ್ಲವೆ? ಈಶ್ವರನೂ ಮಾರನನ್ನು ಭಸ್ಮಾವಶೇಷವಾಗಿ ಮಾಡಿದ. ಇದು ಕವಿಗೆ ಗೊತ್ತಿದೆ. ಮಾರನಿಗ್ರಹವನ್ನಿಬ್ಬರೂ ಮಾಡಿದರೂ, ಅವರು ಮಾಡಿದ ರೀತಿಯಲ್ಲಿ ವ್ಯತ್ಯಾಸವಿದೆ.

**ಕಾಮಕ್ರೋಧೌ ದ್ವಯಮಪಿ ಯುದಿ ಪ್ರತ್ಯನೀಕಂ ವಶಿತ್ವೇ**
**ಹತ್ವಾನಂಗಂ ಕಿಮಿವ ಹಿ ರುಷಾ ಸಾಧಿತಂ ತ್ರ್ಯಂಬಕೇನ ॥**
**ಯಸ್ತು ಕ್ಷಾಂತ್ಯಾ ಶಮಯತಿ ಶತಂ ಮನ್ಮಥಾದ್ಯಾನರಾತೀನ್**
**ಕಲ್ಯಾಣಂ ವೋ ದಿಶತು ಸ ಮುನಿಗ್ರಾಮಣೀರರ್ಕಬಂಧುಃ ॥**

ಕಾಮಕ್ರೋಧಗಳೆರಡೂ ಸಂಯಮಕ್ಕೆ ಶತ್ರುಗಳು. ತನ್ನ ತಪಸ್ಸಿಗೆ ಭಂಗತಂದ ಕಾಮನನ್ನು ಈಶ್ವರನು ಕೊಂದುದು ನಿಜ. ಆದರೆ ಇದರಿಂದ ಅವನು ಸಾಧಿಸಿದ ಫಲವೇನು? ಕಾಮದ

ಬದಲು ಕ್ರೋಧಕ್ಕೆ ತುತ್ತಾದ. ಬುದ್ಧನಾದರೋ ತನ್ನ ಶಾಂತಿ ಯಿಂದ ಮನ್ಮಥನಂತಹ ನೂರಾರು ಶತ್ರುಗಳನ್ನು ಶಮನ ಮಾಡುತ್ತಾನೆ. ಇದು ಬುದ್ಧನ ವಿಶೇಷಗುಣ. ಇಂತಹ ಮುನಿ ಶ್ರೇಷ್ಠನಾದ ಬುದ್ಧನು ನಮಗೆ ಕಲ್ಯಾಣವನ್ನುಂಟುಮಾಡಲಿ. ಎಂದು ಬುದ್ಧನ ಅಮೋಘವಾದ ಶಾಂತಸ್ವಭಾವವನ್ನು ಕವಿಯು ಸೊಗಸಾಗಿ ಚಿತ್ರಿಸಿದ್ದಾನೆ.

ಈ ಸಂಗ್ರಹದಲ್ಲಿ ಬುದ್ಧದೇವನ ಬಹುಮುಖವಾದ ದಯಾ ಮಯಕಾರ್ಯಗಳನ್ನು ವರ್ಣಿಸಿರುವ ಪದ್ಯಗಳಿವೆ. ಕಾರುಣ್ಯ ಮೂರ್ತಿಯಾದ ಬುದ್ಧನು ತಾನು ಕಂಡ ಬೆಳಕನ್ನು ಅಂಧಕಾರ ದಲ್ಲಿ ಮುಳುಗಿದ್ದ ಜನಗಳಿಗೆ ತೋರುವುದಕ್ಕಾಗಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಸಂಚಾರಮಾಡಿ, ಜನರಿಗೆ ಜ್ಞಾನ ಭಿಕ್ಷೆಯಿತ್ತು, ಲೋಕಸಂಗ್ರಹ ಮಾಡಿದ ವಿಧಾನವನ್ನು ಬಗೆ ಬಗೆಯಾಗಿ ವರ್ಣಿಸುವ ಪದ್ಯಗಳು ಇಲ್ಲಿವೆ. ಇತರ ದೇವತೆಗ ಳನ್ನೂ ಋತು ಮೊದಲಾದುವುಗಳನ್ನೂ ವರ್ಣಿಸಿರುವ ಪದ್ಯ ಗಳೂ ಸ್ವಾರಸ್ಯವಾಗಿವೆ. ಈಗ ಅಚ್ಚಾಗಿರುವ ಕವೀಂದ್ರವಚನ ಸಮುಚ್ಚಯವು ಅಸತೀವ್ರಜ್ಯದೊಂದಿಗೆ ಮುಗಿಯುತ್ತದೆ. ಮೂಲಗ್ರಂಥದಲ್ಲಿ ಇನ್ನೂ ಕೆಲವು ಪ್ರಕರಣಗಳಿದ್ದಿರಬೇಕು. ಅವು ಈಗ ನಮಗೆ ದೊರೆತಿಲ್ಲ. ಎಲ್ಲಿಯೋ ಲುಪ್ತವಾಗಿವೆ; ಅಥವಾ ಸಂಗ್ರಹಕಾರನು ಗ್ರಂಥವನ್ನು ಪೂರ್ಣಮಾಡುವ ಮೊದಲೇ ಅವನಿಗೆ ಬಲವಾದ ಒಂದು ಆತಂಕವೊದಗಿರಬೇಕು. ಖಂಡವಾದ ಈ ಗ್ರಂಥವನ್ನು ನೋಡಿದರೆ ಈ ಎರಡು ಊಹೆ ಗಳು ಮಾತ್ರ ಸಾಧ್ಯ. ಗ್ರಂಥ ಖಂಡವಾಗಿದ್ದರೂ ಕಬ್ಬಿನ ತುಂಡಿನಂತಿದೆ.

## ೨. ಸದುಕ್ತಿಕರ್ಣಾಮೃತ

ಕವೀಂದ್ರವಚನ ಸಮುಚ್ಚಯವು ಹುಟ್ಟಿದ ಎರಡು ಶತಮಾನಗಳೊಳಗಾಗಿ ಇನ್ನೊಂದು ದೊಡ್ಡ ಸುಭಾಷಿತಸಂಗ್ರಹವು ತಲೆದೋರಿತು. ಹನ್ನೆರಡನೆಯ ಶತಮಾನದಲ್ಲಿ ವಂಗದೇಶದ ದೊರೆಯಾಗಿದ್ದ ಲಕ್ಷ್ಮಣಸೇನನ ಮಾಂಡಲಿಕನಾದ ವಟುದಾಸನ ಮಗ ಶ್ರೀಧರದಾಸನೆಂಬವನು ಇದನ್ನು ರಚಿಸಿದನು. ವಟುದಾಸನು ಆದಿವರಾಹಸ್ವಾಮಿಯ ಭಕ್ತ. ಶ್ರೀಧರದಾಸನು ತನ್ನ ತಂದೆಯನ್ನು "ಶ್ರೀಮಾನಾದಿವರಾಹಪಾದಸರಸೀಜನ್ಮಪ್ರಣಾಮಪ್ರಿಯಃ" ಎಂದು ವರ್ಣಿಸಿದ್ದಾನೆ. ಈ ಸಂಗ್ರಹದಲ್ಲಿ ಮೊದಲು ದೇವತಾಸ್ತೋತ್ರ, ಆಮೇಲೆ ನಾಯಿಕಾ ಲಕ್ಷಣ ಮೊದಲಾದ ಶೃಂಗಾರ ಪ್ರಧಾನವಾದ ಪದ್ಯಗಳು, ಋತುವರ್ಣನೆ, ಚಾಟೂಕ್ತಿ, ಅನಂತರ ಮೃಗಪಕ್ಷಿ ಸಸ್ಯಗಳನ್ನು ಉದ್ದೇಶಿಸಿ ಹೇಳಿರುವ ಅನ್ಯಾಪದೇಶ ವಾಕ್ಯಗಳು, ಮುಂದೆ ಮನುಷ್ಯ, ಅಶ್ವ, ಗೋ, ಕವಿ, ದುರ್ಜನ, ರಾಜ, ಕಾಲ ಇವುಗಳ ಗುಣಾವಗುಣಗಳನ್ನು ಚಿತ್ರಿಸುವ ಪದ್ಯಗಳು— ಹೀಗೆ ಕಂಡುಬರುತ್ತವೆ. ಗ್ರಂಥವನ್ನು ಐದು ಭಾಗಗಳಾಗಿ ವಿಭಾಗಮಾಡಿದ್ದಾರೆ.

**"ಅಮರಾಶೃಂಗಾರಚಟೂ ಅಪದೇಶೋಚ್ಚಾವಚೌ**
**ಅಪಿ ಕ್ರಮಶಃ ॥**
**ಇತಿ ಪಂಚಭಿಃ ಪ್ರವಾಹೈಸ್ಸದುಕ್ತಿಕರ್ಣಾಮೃತಂ ಕ್ರಿಯತೇ ॥"**

ಈ ಅಮರ, ಶೃಂಗಾರ, ಚಾಟು, ಅಪದೇಶ, ಉಚ್ಚಾವಚ ಎಂಬ ಐದು ಅಧ್ಯಾಯಗಳನ್ನೂ ಒಂದೊಂದು "ಪ್ರವಾಹ"ವೆಂದು ಕರೆದಿದ್ದಾರೆ. ಈ ಪ್ರವಾಹಗಳು "ವೀಚಿ"ಗಳಾಗಿ ಪುನಃ ವಿಭಾಗವಾಗಿವೆ. ಇದರಲ್ಲಿ ಸುಮಾರು ಐನೂರು ವೀಚಿಗಳೂ

೨೫೦೦ ಪದ್ಯಗಳೂ ಇವೆ. ಕವೀಂದ್ರ ವಚನಸಮುಚ್ಚಯದಲ್ಲಿನ ಅನೇಕ ಪದ್ಯಗಳು ಇದರಲ್ಲಿ ಕಂಡುಬರುತ್ತವೆ. ಇದರ ಜತೆಗೆ ನಮ್ಮ ಬಳಕೆಗೆ ಹೆಚ್ಚಾಗಿ ಬರದ, ಪ್ರಸಿದ್ಧರಲ್ಲದ, ಆದರೆ ಶ್ರೇಷ್ಠರಾದ ಕವಿಗಳ ಸ್ವಾರಸ್ಯವಾದ ಅನೇಕ ಪದ್ಯಗಳಿವೆ. ಶ್ರೀಧರದಾಸನು ತನ್ನ ಕಾಲದಲ್ಲಿ ಬಹಳವಾಗಿ ಬಳಕೆಯಲ್ಲಿದ್ದ ಕವೀಂದ್ರವಚನಸಮುಚ್ಚಯವನ್ನು ಪ್ರಕರಣ ಮೊದಲಾದುವುಗಳಲ್ಲಿ ವ್ಯತ್ಯಾಸಮಾಡಿ ಅನೇಕ ಹೊಸ ಸುಭಾಷಿತಗಳನ್ನು ಸೇರಿಸಿ, ಹೊಸ ಸಂಗ್ರಹವನ್ನೇ ರಚಿಸಿದನೆಂದು ತೋರುತ್ತದೆ. ಈ ಸಂಗ್ರಹದ ಕಾಲ ಸುಮಾರು ಕ್ರಿ. ಶ. ೧೨೦೫.

## ೩. ಸೂಕ್ತಿಮುಕ್ತಾವಳಿ

ಈ ಸಂಗ್ರಹಕ್ಕೆ ಈ ಹೆಸರು ಅನ್ವರ್ಥವಾದುದು. ಸೂಕ್ತಿಮುಕ್ತಾವಳಿಯಕಾಲ ಕ್ರಿ.ಶ. ೧೨೫೭. ಇದರ ಕರ್ತೃ ಜಲ್ಹಣ. ನೆಂದು ಗ್ರಂಥದ ಆದಿಯಲ್ಲಿ ಹೇಳಿದೆ. ಈತನು ತನ್ನ ಕಾಲದವರೆಗೆ ಸುಭಾಷಿತಸಂಗ್ರಹಗಳನ್ನು ನೋಡಿ, ಅವುಗಳಿಂದ ಪದ್ಯಗಳನ್ನು ಆಯ್ದು ಇದನ್ನು ರಚಿಸಿದಂತೆ ತೋರುತ್ತದೆ. ಈ ಸಂಗ್ರಹವು ಸಾಹಿತ್ಯದ ಸಾರವೆಂದು ಜಲ್ಹಣನ ಅಭಿಪ್ರಾಯ. "ಸಾಹಿತ್ಯವಿದ್ಯಾಹೃದಯಂ ಜ್ಞಾತುಮಿಚ್ಛಸಿ ಚೇತ್ಸುಖಂ । ತತ್ಪಶ್ಯ ಜಲ್ಹಣಕೃತಾಂ ಸೂಕ್ತಿಮುಕ್ತಾವಲೀಮಿಮಾಂ ॥" (ಸಾಹಿತ್ಯವಿದ್ಯೆಯ ಹೃದಯವನ್ನು ತಿಳಿಯಬೇಕಾದರೆ ಜಲ್ಹಣನು ರಚಿಸಿರುವ ಸೂಕ್ತಿಮುಕ್ತಾವಳಿಯನ್ನು ನೋಡು) ಎಂದು ಪೀಠಿಕೆಯಲ್ಲಿ ಹೇಳಿದ್ದಾನೆ. ಜಲ್ಹಣನು ಯಾದವ ವಂಶಕ್ಕೆ ಸೇರಿದ ಮಲ್ಲುಗಿ ಎಂಬ ದೊರೆಯಬಳಿ ಹಸ್ತಿಸೈನ್ಯಕ್ಕೆ ಅಧಿಕಾರಿಯಾಗಿದ್ದ ದಾದಾ ಎಂಬುವನ ಮರಿಮಗ. ಜಲ್ಹಣನೂ ತನ್ನ ಪೂರ್ವಿಕರಂತೆಯೇ

ಯಾದವ ವಂಶದ ರಾಜರ ಆಶ್ರಯದಲ್ಲಿ ಬೆಳೆದವನು. ಸೈನ್ಯಾಧಿಕಾರಿಯಾಗಿದ್ದವನು. ಯಾದವ ವಂಶದ ಕೃಷ್ಣನು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಜೀವಿಸಿದ್ದನು. ಇವನ ಕಾಲ ಸುಮಾರು ಕ್ರಿ. ಶ. ೧೨೪೭-೧೨೬೦. ಜಲ್ಹಣನಿಗೆ ಆರೋಹಕಭಗದತ್ತನೆಂಬ ಇನ್ನೊಂದು ಹೆಸರು ಅಥವಾ ಬಿರುದಿತ್ತು. ಇವನು ಪರಾಕ್ರಮಿ, ವಿದ್ವಾಂಸ, ಆಶ್ರಯಿಗಳಿಗೆ ಕಲ್ಪವೃಕ್ಷದಂತಿದ್ದವನು ಎಂದು ತಿಳಿದುಬರುತ್ತದೆ. ಸೂಕ್ತಿಮುಕ್ತಾವಳಿಯನ್ನು ಇವನೊಬ್ಬನೇ ಸ್ವತಃ ಸಂಗ್ರಹಿಸಲಿಲ್ಲ. ಅವನ ಆಶ್ರಯದಲ್ಲಿದ್ದ ವೈದ್ಯಭಾನುಪಂಡಿತನೆಂಬ ಬಿರುದುಳ್ಳ ಭಾನುಕವಿಯು ಜಲ್ಹಣನಿಗಾಗಿ ಇದನ್ನು ಸಂಗ್ರಹಿಸಿದನೆಂದು, ಗ್ರಂಥಪರಿಸಮಾಪ್ತಿ ಭಾಗದಲ್ಲಿರುವ " ಜಲ್ಹಸ್ಯಾರ್ಥೇ ವ್ಯರಚಿ ಭಿಷಜಾ ಭಾನುನಾ ಸೇಯಮಿಷ್ಟಾ " ಎಂಬ ವಾಕ್ಯದಿಂದ ತಿಳಿದುಬರುತ್ತದೆ. ಇದರಲ್ಲಿ ಪ್ರತಿಯೊಂದು ಅಧ್ಯಾಯಕ್ಕೂ " ಪದ್ಧತಿ " ಎಂಬ ಹೆಸರು ಕೊಟ್ಟಿದೆ. ಇಂತಹ ಪದ್ಧತಿಗಳು ೧೩೩ ಇವೆ. ಸಂಗ್ರಹಕಾರನು ಈಪದ್ಧತಿಗಳ ಹೆಸರುಗಳನ್ನು ಪದ್ಯರೂಪದಲ್ಲಿ ಮೊದಲೇ ಸೂಚಿಸಿದ್ದಾನೆ. ಕವಿಕಾವ್ಯಪ್ರಶಂಸಾ ಪದ್ಧತಿಯಲ್ಲಿ, ನೂರಾರು ಮಂದಿ ಕವಿಗಳ ಮತ್ತು ಕವಯಿತ್ರಿಯರ ಹೆಸರುಗಳನ್ನೂ ಅವರ ಕಾವ್ಯಗಳನ್ನೂ ಅವುಗಳ ವೈಶಿಷ್ಟ್ಯವನ್ನೂ ವಿವರಿಸುವ ಪದ್ಯಗಳಿವೆ. ವ್ಯಾಸ, ವಾಲ್ಮೀಕಿ, ಕಾಳಿದಾಸ, ಭಾಸ, ಬಾಣ, ರಾಜಶೇಖರ, ಜಯದೇವರ ಹೆಸರುಗಳೊಂದಿಗೆ, ಶೀಲಾಭಟ್ಟಾರಿಕಾ, ವಿಕಟನಿತಂಬಾ, ವಿಜಯಾಂಕಾ, ಪ್ರಭುದೇವಿ, ವಿಜ್ಜಿಕಾ, ಮೊದಲಾದ ಸ್ತ್ರೀ ಕವಿಗಳ ಹೆಸರುಗಳೂ ಇವೆ. ಈ ಸಂಗ್ರಹದಲ್ಲಿ ದೇವತಾಸ್ತುತಿ ರೂಪವಾದ ಪದ್ಯಗಳು ಗ್ರಂಥದ ಕೊನೆಯಲ್ಲಿ ಬರುತ್ತವೆ.

## ೪. ಶಾರ್ಙ್ಗಧರಪದ್ಧತಿ

ಶಾರ್ಙ್ಗಧರಪದ್ಧತಿಯನ್ನು ಸಂಗ್ರಹಿಸಿದವನು, ಹಮ್ಮೀರ ರಾಜನ ಮರಿಮಗ ಶಾರ್ಙ್ಗಧರ. ಇದನ್ನು ಕ್ರಿ. ಶ. ೧೩೬೩ ರಲ್ಲಿ ಸಂಗ್ರಹಿಸಿದಂತೆ ತಿಳಿದುಬರುತ್ತದೆ. ಶಾರ್ಙ್ಗಧರನು ಸಂಗ್ರಹದ ರಚನೆಯಲ್ಲಿ ತನ್ನದೇ ಆದ ಒಂದು ಮಾರ್ಗವನ್ನು ಅನುಸರಿಸಿದ್ದಾನೆ. ಮೊದಲು ನಮಸ್ಕಾರ, ಆಶೀರ್ವಾದ, ಕವಿವರ್ಣನ, ದುರ್ಜನಸಜ್ಜನರು, ಅನ್ಯೋಕ್ತಿ, ಮೃಗಾದಿವರ್ಣನೆಗಳು, ಇವು ಆದಮೇಲೆ ಶೃಂಗಾರರಸದ ಪದ್ಯಗಳು, ಹೀಗೆ ವಿಷಯ ವಿಭಾಗ ಮಾಡಿದ್ದಾನೆ. ಇವುಗಳ ಜತೆಗೆ ಮತ್ತಾವ ಇತರ ಸುಭಾಷಿತ ಗ್ರಂಥಗಳಲ್ಲಿಯೂ ದೊರೆಯದಿರುವ, ಉಪಯುಕ್ತವೂ ಜನಪ್ರಿಯವೂ ಆದ, ಧನುರ್ವೇದ, ಗಾಂಧರ್ವವೇದ, ಆಯುರ್ವೇದಗಳಿಗೆ ಸಂಬಂಧಿಸಿದ ಉತ್ತಮ ಪದ್ಯಗಳನ್ನೂ ಸಂಗ್ರಹಿಸಿಕೊಟ್ಟಿದ್ದಾನೆ. ಅಲ್ಲದೆ ಶಕುನಜ್ಞಾನ, ಭೂತವಿದ್ಯೆ, ಕೇಶರಂಜನೆ, ಸ್ತ್ರೀಪುರುಷ ಜಾತಿಭೇದಗಳು ಇವುಗಳಿಗೆ ಅನ್ವಯಿಸುವ ಪದ್ಯಗಳೂ ಇವೆ. ಇವುಗಳಲ್ಲಿ ಒಂದೊಂದೂ ಒಂದೊಂದು ಪದ್ಧತಿಯಾಗಿದೆ. ಈ ವಿಷಯಗಳು ಮುಗಿದಮೇಲೆ ನಾಯಿಕಾನಾಯಕರ ವರ್ಣನೆ, ದೂತೀಪ್ರೇಷಣ ಮುಂತಾದ ಶೃಂಗಾರಪ್ರಧಾನಪದ್ಯಗಳು; ಅನಂತರ ಒಗಟೆಗಳು. ಒಗಟೆಗಳಿಗೇ ಒಂದು ಅಧ್ಯಾಯ ಮೀಸಲಾಗಿದೆ. ಕೊನೆಯಲ್ಲಿ ಹಠಯೋಗ ಮೊದಲಾದ ಯೋಗಮಾರ್ಗಗಳನ್ನು ವಿವರಿಸುವ ಮತ್ತು ಅವುಗಳ ಮಹತ್ವವನ್ನು ತೋರಿಸುವ ಪದ್ಯಗಳಿವೆ. ಆಮೇಲೆ ಗ್ರಂಥಪ್ರಶಂಸಾ ಮತ್ತು ಖಡ್ಗಪರೀಕ್ಷಾವಾಕ್ಯಗಳು. ಇವೆಲ್ಲವೂ ಪ್ರಾಚೀನ ಕವಿಗಳ ಪದ್ಯಗಳೇ. ಶಾರ್ಙ್ಗಧರ ಪದ್ಧತಿಯು ಸುಭಾಷಿತಸಂಗ್ರಹವಾದರೂ ಇದರಲ್ಲಿ ಸಾಮಾನ್ಯವಾದ ಅರ್ಥ

ದಲ್ಲಿ "ಸುಭಾಷಿತ"ಗಳ ಗುಂಪಿಗೆ ಸೇರದ ವಿಧವಿಧವಾದ ವಿಷಯಗಳಿಗೆ ಸಂಬಂಧಿಸುವ ಅನೇಕ ಪದ್ಯಗಳಿವೆ. ಮೇಲೆ ಸೂಚಿಸಿರುವ ಕೆಲವು ವಿಷಯಗಳು ಶಾರ್ಙ್ಗಧರನು ಈ ಸಂಗ್ರಹದ ರಚನೆಯಲ್ಲಿ ಹೊಸಮಾರ್ಗವನ್ನು ಹಿಡಿದನೆಂಬುದನ್ನು ಸ್ಪಷ್ಟಪಡಿಸುತ್ತವೆ. ಈ ಗ್ರಂಥದಲ್ಲಿ ಒಟ್ಟು ೧೬೩ ಪದ್ಧತಿಗಳೂ ೪೬೮೯ ಪದ್ಯಗಳೂ ಇವೆ. ಹೀಗೆ ಅನೇಕ ವಿಷಯಗಳ ಮೇಲೆ ಆರಿಸಿರುವ ಒಂದೊಂದು ಪದ್ಯವೂ ಒಂದು ಪರಿಮಳವಿಶಿಷ್ಟವಾದ ಹೂ. ಇಂತಹ ಹೂಗಳಿಂದ ವಾಚಕರು ಸೊಗಸಾದ ಹಾರವೊಂದನ್ನು ರಚಿಸಿಕೊಳ್ಳಲಿ ಎಂದು ವಿನಯವಾಗಿ ಗ್ರಂಥದ ಪ್ರಾರಂಭದಲ್ಲಿ ತನ್ನ ಆಶೆಯನ್ನು ವ್ಯಕ್ತಪಡಿಸಿದ್ದಾನೆ.

**ತೇ ಸಜ್ಜನಾಃ ಸುಕವಿಶಾಖಿಕವಿತ್ವಪುಷ್ಪಾ**
**ಣ್ಯಾದಾಯ ಗುಂಫಿತವತಃ ಸುಗುಣೈರ್ಮಯೈತತ್ ॥**
**ಸಂಧಾರಯಂತು ಕುಸುಮೋಜ್ಜ್ವಲಹಾರರೂಪಂ**
**ಕಂಠೇ ಸುಭಾಷಿತಮುಪಾಸ್ತಸಮಸ್ತದೋಷಂ ॥**

ಸತ್ಕವಿಗಳೆಂಬ ವೃಕ್ಷಗಳಿಂದ ಕವಿತ್ವಕುಸುಮಗಳನ್ನು ಆಯ್ದು ಈ ನನ್ನ ವರ್ಗೀಕರಣ ಗುಣದಿಂದ ಮಾಲೆಯನ್ನು ರಚಿಸಿದ್ದೇನೆ. ಈ ದೋಷರಹಿತವಾದ ಉಜ್ವಲಿಸುವ ಪುಷ್ಪಹಾರದಂತಿರುವ ಸುಭಾಷಿತವನ್ನು ಸಜ್ಜನರು ಕಂಠದಲ್ಲಿ ಧರಿಸಲಿ.

ಶಾರ್ಙ್ಗಧರ ಪದ್ಧತಿಯು ನಿಜವಾಗಿಯೂ ಸುಕವಿತ್ವಪುಷ್ಪಗಳ ಉಜ್ವಲಹಾರ.

## ೫. ಸುಭಾಷಿತಾವಳಿ

ಸುಭಾಷಿತಾವಳಿಯು ಸುಭಾಷಿತಗಳ ಒಂದು ದೊಡ್ಡ ಭಂಡಾರ. ಇದನ್ನು ಸಂಗ್ರಹಿಸಿದವನು ವಲ್ಲಭದೇವನೆಂಬ ಕವಿ.

ಈತನು ಕಾಶ್ಮೀರ ದೇಶದವನು. ಈ ಸಂಗ್ರಹದಲ್ಲಿರುವ ಬಹು ಭಾಗ ಉತ್ತರಭಾರತದ ಕವಿಗಳಿಗೆ ಸೇರಿದುವು. ಗ್ರಂಥಕರ್ತೃವಾದ ವಲ್ಲಭದೇವನು ಕ್ರಿ.ಶ. ಹದಿನೈದನೆಯ ಶತಮಾನದಲ್ಲಿದ್ದಿರಬಹು ದೆಂದು ಊಹಿಸಲಾಗಿದೆ. ಬೊಂಬಾಯಿ ಎಲ್ಫಿನ್‌ಸ್ಟನ್ ಕಾಲೇಜಿ ನಲ್ಲಿ ಸಂಸ್ಕೃತ ಪ್ರೊಫೆಸರಾಗಿದ್ದ ಪೀಟರ್‌ಸನ್ ಎಂಬವರೂ, ಜಯಪುರ ಸಂಸ್ಥಾನದ ದುರ್ಗಾಪ್ರಸಾದರೆಂಬ ಪಂಡಿತರೂ ಈ ಗ್ರಂಥದ ಮೂಲಪ್ರತಿಗಳನ್ನು ಹುಡುಕಿ, ದೊರೆತ ಪುಸ್ತಕಗಳನ್ನು ಪರಿಶೋಧಿಸಿ, ಅಮೂಲ್ಯವಾದ ಉಪೋದ್ಘಾತವನ್ನು ಬರೆದು, ಅಚ್ಚುಹಾಕಿಸಿದರು.

ಈ ಸಂಗ್ರಹದಲ್ಲಿ ೧೦೧ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯಕ್ಕೂ "ಪದ್ಧತಿ" ಯೆಂದೇ ಹೆಸರು. ಇವು ಮಂಗ ಲಾಚರಣೆ, ನಮಸ್ಕಾರ ಪದ್ಧತಿಗಳಿಂದ ಮೊದಲಾಗಿ ಭಗವ ತ್ಸ್ವರೂಪ ವರ್ಣನೆಯಲ್ಲಿ ಕೊನೆಗಾಣುತ್ತವೆ. ಇವುಗಳ ನಡುವೆ ಕವಿ, ಕಾವ್ಯ, ಸಜ್ಜನರು, ಉದಾರರು, ಸಿಂಹ ಮೊದ ಲಾದ ಪ್ರಾಣಿಗಳು, ಮೇಘ ಮುಂತಾದ ಅಚೇತನವಸ್ತುಗಳು ಕೇಶಾದಿ ಶರೀರಾಂಗಗಳು, ಷಡೃತುಗಳು, ಪ್ರಣಯಿಗಳ ಬಹು ಮುಖವಾದ ಚೇಷ್ಟಾವಿಲಾಸಾದಿಗಳು, ಧರ್ಮಕಥೆ, ಶೀಲಸ್ವಭಾ ವಗಳು, ಸಂಕೀರ್ಣವಸ್ತು ವರ್ಣನೆ, ಇವೆಲ್ಲವೂ ಅಡಕವಾಗಿವೆ. ಇದರಲ್ಲಿಯ ಒಟ್ಟು ಪದ್ಯಗಳ ಸಂಖ್ಯೆ ೩೫೨೭. ವಿಷಯ ಮತ್ತು ಶ್ಲೋಕಗಳ ಸಂಖ್ಯೆ ಇವೇ ಈ ಸಂಗ್ರಹದ ಯೋಗ್ಯತೆ ಯನ್ನು ಹೇಳುವುದಕ್ಕೆ ಸಾಕು. ಕವಿಯ ವಾಣಿಯ ಸ್ವಾರಸ್ಯ ವನ್ನು ಅರಿತು ಅದರ ಹಿಂದಡಗಿರುವ ಅನಂತಾನಂತ ಭಾವ ಗಳನ್ನು ಹೊರಗೆಡಹಬಲ್ಲ ಶಕ್ತಿ ಅಪೂರ್ವವಾದ ಶಕ್ತಿ. ಇಂತಹ ಶಕ್ತಿ, ವಲ್ಲಭದೇವನು ಕವಿಕಾವ್ಯಪದ್ಧತಿಯಲ್ಲಿ ಹೇಳಿರುವಂತೆ,

**ಅನಪೇಕ್ಷಿತಗುರುವಚನಾ ಸರ್ವಾನ್ ಗ್ರಂಥೀನ್ ವಿಭೇದಯತಿ ಸಮ್ಯಕ್ ।**
**ಪ್ರಕಟಯತಿ ಪರರಹಸ್ಯಂ ವಿಮರ್ಶಶಕ್ತಿರ್ನಿಜಾ ಜಯತಿ ॥**

ನೈಜವಾದ ಶಕ್ತಿ; ಗುರುಬೋಧೆಯನ್ನು ಅಪೇಕ್ಷಿಸುವುದಲ್ಲ. ಆ ವಿಮರ್ಶಶಕ್ತಿ ಎಲ್ಲ ತೊಡಕುಗಳನ್ನೂ ಬಿಡಿಸಿ, ಪರರಹಸ್ಯವನ್ನು ಪ್ರಕಟಿಸುತ್ತದೆ. ವಲ್ಲಭದೇವನಿಗೆ ಇಂತಹ ದೈವದತ್ತವಾದ ವಿಮರ್ಶಶಕ್ತಿಯಿದ್ದಿತು. ಕಾವ್ಯದ ಪ್ರಾಶಸ್ತ್ಯವೂ ಕವಿಯ ಮಹಿಮೆಯೂ ಆತನಿಗೆ ಚೆನ್ನಾಗಿ ತಿಳಿದಿದ್ದುವು. ಅದರ ಜತೆಗೆ ಉತ್ತಮಕವಿತೆ ಯಾವುದೆಂಬುದನ್ನು ನಿಷ್ಕರ್ಷಿಸಬಲ್ಲ ಸಾಮರ್ಥ್ಯವೂ ಇತ್ತು. ಆದುದರಿಂದ ಆತನು ಆರಿಸಿರುವ ಪದ್ಯಗಳು ಸೊಗಸಾಗಿವೆ; ಸ್ವಾರಸ್ಯವಾಗಿವೆ. ಈ ಸುಭಾಷಿತಾವಳಿಗೆ ಉಪೋದ್ಘಾತವನ್ನು ಬರೆಯುತ್ತಾ ಪೀಟರ್ಸನ್ ಅವರು ಗ್ರಂಥದ ವಿಷಯವಾಗಿ "ಸಂಸ್ಕೃತಸಾಹಿತ್ಯದಲ್ಲಿ ಶ್ರೇಷ್ಠವಾದ ಪದ್ಯಗಳು ಇಲ್ಲಿವೆ. ಇಲ್ಲಿಯ ಪದ್ಯಗಳು ಆಗಿನ ಕಾಲದ ಜನರ ತುಂಬುಜೀವನವನ್ನೂ ಜೀವನದ ವಿಧಾನವನ್ನೂ ಎಲ್ಲಕ್ಕಿಂತ ಮಿಗಿಲಾಗಿ ಅವರ ರಸಿಕತೆಯನ್ನೂ ತೋರಿಸುತ್ತವೆ. ಇಲ್ಲಿ ಉದ್ಧರಿಸಿರುವ ಪದ್ಯಗಳ ಕರ್ತೃಗಳು ಕಾವ್ಯಶ್ರೀಯ ಯೋಗ್ಯ ಪುತ್ರರು. ಈ ಕವಿಗಳು ತಮ್ಮ ತಾಯಿಗೆ ಒಂದು ವಿಶೇಷ ಗೌರವವನ್ನು ತಂದುಕೊಟ್ಟಿದ್ದಾರೆ. ಕವಿತಾಸರಸ್ವತಿಯು ಇಂತಹ ಸತ್ಪುತ್ರರನ್ನು ಪಡೆದು ಹೆಮ್ಮೆಪಡಬೇಕಾದುದು ನ್ಯಾಯ." ಎಂದು ಹೇಳಿದ್ದಾರೆ. ಸಂಗ್ರಹದಲ್ಲಿನ ಕೆಲವು ಪದ್ಯಗಳನ್ನು ಓದಿದರೆ ಇವರ ಮಾತು ಸತ್ಯವೆನಿಸುತ್ತದೆ.

# ೬. ಸುಭಾಷಿತರತ್ನ ಭಾಂಡಾಗಾರ

ಸಂಗ್ರಹ ಮತ್ತು ಕಾಲದ ದೃಷ್ಟಿಯಿಂದ ಬಹುಮುಖ್ಯವಾದ ಇನ್ನೊಂದು ಗ್ರಂಥವೆಂದರೆ, "ಸುಭಾಷಿತರತ್ನಭಾಂಡಾಗಾರ." ಇದು ಬೊಂಬಾಯಿಯ 'ನಿರ್ಣಯಸಾಗರ' ಮುದ್ರಣಾಲಯದಲ್ಲಿ ಕಳೆದ ಶತಮಾನದ ಆದಿಭಾಗದಲ್ಲಿ ಅಚ್ಚಾಯಿತು. ಇದನ್ನು ಸಂಗ್ರಹಿಸಿದವರು ಕಾಶೀನಾಥಶರ್ಮ ಎಂಬವರು.

ಅನೇಕ ಕಾವ್ಯ, ನಾಟಕ, ಅಲಂಕಾರಾದಿ ಗ್ರಂಥಗಳಿಂದಲೂ ಇತಿಹಾಸಪುರಾಣಗಳಿಂದಲೂ ಆರಿಸಿ ಪದ್ಯಗಳನ್ನು ಇದರಲ್ಲಿ ಕೊಡಲಾಗಿದೆ. ಇಲ್ಲಿಯ ಒಟ್ಟು ಪದ್ಯಗಳ ಸಂಖ್ಯೆಯು ಹತ್ತು ಸಾವಿರಕ್ಕೆ ಮೇಲಿದೆ. ವಿಷಯಗಳೂ ಹಾಗೆಯೇ ಅನೇಕ. ಒಂದೊಂದು ವಿಷಯದಮೇಲೂ ಅದುವರೆಗೆ ಸುಭಾಷಿತಸಂಗ್ರಹಗಳಲ್ಲಿ ಆರಿಸಿದ್ದ ಮತ್ತು ಇತರ ಗ್ರಂಥಗಳಲ್ಲಿ ಕಂಡುಬಂದ ಪದ್ಯಗಳೆಲ್ಲವನ್ನೂ ಕೊಡಲಾಗಿದೆ. ಸ್ವಾರಸ್ಯವಾದ ಪದ್ಯಗಳನ್ನು ಮಾತ್ರ ಆರಿಸುವುದಕ್ಕೆ ಬದಲು ಬರಿಯ ಸಂಗ್ರಹವನ್ನು ಮಾತ್ರ ಇವರು ಮಾಡಿದಂತೆ ತೋರುತ್ತದೆ. ಆದುದರಿಂದ ಇಲ್ಲಿಯ ಪದ್ಯಗಳೆಲ್ಲವೂ ಸ್ವಾರಸ್ಯವಾಗಿವೆಯೆಂದು ಹೇಳುವಂತಿಲ್ಲ. ಆದರೆ ಕೆಲವು ಸೊಗಸಾದ ಪದ್ಯಗಳು ಅಲ್ಲಲ್ಲಿ ದೊರೆಯುತ್ತವೆ.

ಈ ಸುಭಾಷಿತರತ್ನಭಾಂಡಾಗಾರದಲ್ಲಿ ಮಂಗಲಾಚರಣ, ಸಾಮಾನ್ಯ, ರಾಜ, ಚಿತ್ರ, ಅನ್ಯೋಕ್ತಿ, ನವರಸ ಎಂಬ ಆರು ಪ್ರಕರಣಗಳಿವೆ. ಸಂಗ್ರಹಕಾರರೇ ರಚಿಸಿರುವ ದೇವರಸ್ತೋತ್ರವಾದ ಮೇಲೆ ಸಾಮಾನ್ಯಪ್ರಕರಣದಲ್ಲಿ ಸುಭಾಷಿತ, ವಿದ್ಯೆ, ಕಾವ್ಯ, ಉದಾರಿ, ಯಾಚಕ, ಸಂತೋಷ, ಉದ್ಯಮಗಳನ್ನು ಕುರಿತ ಆರ್ಯೋಕ್ತಿಗಳು ದೊರೆಯುತ್ತವೆ. ಆಮೇಲೆ ಅಕ್ಬರ್,

ಅಶೋಕ, ಭೋಜ, ರುದ್ರ, ಹಮ್ಮೀರ ಮೊದಲಾದ ದೊರೆಗಳನ್ನು ವರ್ಣಿಸಿರುವ ಪದ್ಯಗಳಿವೆ. ಈ ಪ್ರಕರಣದಲ್ಲಿಯೇ ಸಮುದ್ರ, ತರು, ನೀತಿ, ಪರ್ವತ ಮೊದಲಾದ ವಿಷಯಗಳೂ ಸೇರಿವೆ. ಚಿತ್ರ ಪ್ರಕರಣದಲ್ಲಿ ಒಗಟೆಗಳೂ ಕರ್ತೃ, ಕರ್ಮ, ಕ್ರಿಯಾಪದಗಳು ಗುಪ್ತವಾಗಿರುವ ಚಿತ್ರಪದ್ಯಗಳೂ ಇವೆ. ಐದನೆಯದು ಅನ್ಯೋಕ್ತಿ ಪ್ರಕರಣ. ನವರಸಪ್ರಕರಣ ಕೊನೆಯದು. ಇದರಲ್ಲಿ ಶೃಂಗಾರ ರಸಕ್ಕೆ ಸೇರಿದ ಪದ್ಯಗಳೇ ಹೆಚ್ಚು.

ಇವೆಲ್ಲವೂ ಆದಮೇಲೆ ಲೋಕದ ಅನುಭವವನ್ನೋ ಒಂದು ಗಾಢವಾದ ಸತ್ಯವನ್ನೋ ವಿಚಿತ್ರವಾದ ರೀತಿಯಲ್ಲಿ ಹೇಳಿರುವ ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಬಹುದಾದ ಸ್ವಾರಸ್ಯವಾದ ವಾಕ್ಯಗಳಿವೆ. ಈ ವಾಕ್ಯಗಳಲ್ಲಿ ಬಹುಭಾಗ ಬಳಕೆಯಲ್ಲಿರುವ ಸಂಸ್ಕೃತಗ್ರಂಥಗಳಲ್ಲಿ ಕಂಡುಬರುವ ಕೆಲವು ಪದ್ಯಗಳ ಒಂದು ಭಾಗ. ಮತ್ತೆ ಕೆಲವು ರೂಢಿಯಲ್ಲಿದ್ದು ಸಂಸ್ಕೃತರ ಬಾಯಲ್ಲಿ ಆಗಾಗ ಬರುತ್ತಿದ್ದ ಪ್ರಾಸಂಗಿಕವಾದ ವಾಕ್ಯಗಳು, ಗಾದೆಗಳು, ಪದ್ಯದ ಭಾಗಗಳು ಅಥವಾ ಗದ್ಯರೂಪದಲ್ಲಿನ ವಾಕ್ಯಗಳು. ಅವು ಪೂರ್ಣವಾದ ಪದ್ಯಗಳಲ್ಲ. ಇಂತಹ ವಾಕ್ಯಗಳನ್ನು ಆರಿಸಿ ಒಟ್ಟುಗೂಡಿಸಿ ಅದಕ್ಕೆ "ಸುಭಾಷಿತರತ್ನಮಂಜೂಷಾ" ಎಂಬ ಹೆಸರನ್ನು ಕೊಡಲಾಗಿದೆ. "ವಿಶಿಷ್ಟರತ್ನಮಯಕೋಶ" ವೆಂಬುದು ಅದರ ಇನ್ನೊಂದು ಹೆಸರು. ಇಂತಹ ಸ್ವಾರಸ್ಯವಾದ ವಾಕ್ಯಗಳನ್ನು ಆರಿಸಿಕೊಟ್ಟಿರುವುದು ಈ ಗ್ರಂಥದ ವೈಶಿಷ್ಟ್ಯ. ಈ ವಾಕ್ಯಗಳು ಒಂದೊಂದೂ ಒಂದೊಂದು ರತ್ನದಂತಿದೆ. ಅವುಗಳ ಸ್ವಾರಸ್ಯವನ್ನೂ ಸ್ವರೂಪವನ್ನೂ ತೋರಿಸುವುದಕ್ಕಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ

"ನ ಕಾಮಸದೃಶೋ ರಿಪುಃ" ಕಾಮಕ್ಕೆ ಸಮನಾದ ಶತ್ರು

ಬೇರೊಂದಿಲ್ಲ. ಈ ವಾಕ್ಯವು ನೆನಪಿನಲ್ಲಿಟ್ಟುಕೊಳ್ಳಲು ಎಷ್ಟು ಸುಲಭವಾಗಿದೆ !

ಮನುಷ್ಯನು ಎಷ್ಟೇ ವಿವೇಕಿಯಾಗಿರಲಿ, ಜಾಗರೂಕನಾಗಿರಲಿ, ಪರರ ಸ್ತೋತ್ರಕ್ಕೆ ವಶುವಾಗುತ್ತಾನೆ. ತನ್ನ ಗುಣ, ಶಕ್ತಿ, ಸಾಮರ್ಥ್ಯಗಳ ಮಿತಿಯನ್ನು ಚೆನ್ನಾಗಿ ಅರಿತಿದ್ದರೂ ಕೂಡ, ಇತರರು ತನ್ನನ್ನು ಹೊಗಳುವಾಗ ಅವೆಲ್ಲವನ್ನೂ ಮರೆತುಬಿಡುತ್ತಾನೆ. ಈ ಕುಂದನ್ನು " ಸ್ತೋತ್ರಂ ಕಸ್ಯ ನ ತುಷ್ಟಯೇ ? " ಎಂಬ ವಾಕ್ಯದಲ್ಲಿ ವ್ಯಕ್ತಪಡಿಸಿದ್ದಾನೆ.

" ಗಂಡುಬೀರಿ "ಯರಿದ್ದ ಸಂಸಾರದಲ್ಲಿ ಸುಖವಿಲ್ಲ. ಹೆಂಗಸು ಗಂಡಸಿನಂತೆ ನಡೆದರೆ, ಅಂತಹ ಮನೆ ನಾಶವಾದಂತೆಯೇ. ಇದನ್ನು ಕವಿಯೊಬ್ಬನು " ಸ್ತ್ರೀ ಪುಂವಚ್ಚ ಪ್ರಭವತಿ ಯದಾ ತದ್ಧಿಗೇಹಂ ವಿನಷ್ಟಂ " ಅಂದಿದ್ದಾನೆ.

ಶೀಲವತಿಯಾದ ಹೆಂಗಸು ಮಾಡಿಕೊಳ್ಳುವ ಅಲಂಕಾರವೆಲ್ಲವೂ ಆಕೆಯ ಸೌಂದರ್ಯವೆಲ್ಲವೂ ತನ್ನ ಪ್ರಿಯನ ನೋಟಕ್ಕಾಗಿ, ಅವನ ಸಂತೋಷಕ್ಕಾಗಿ ಎಂಬುದನ್ನು ಕಾಳಿದಾಸನು ಹೀಗೆ ಹೇಳಿದ್ದಾನೆ : " ಸ್ತ್ರೀಣಾಂ ಪ್ರಿಯಾಲೋಕಫಲೋ ಹಿ ವೇಷಃ ".

ಕಾಮಕ್ಕೆ ಸಮನಾದ ಶತ್ರು ಬೇರೆ ಹೇಗಿಲ್ಲವೋ ಹಾಗೆ ಶಾಂತಿಗೆ ಸಮವಾದ ಸುಖ ಬೇರೊಂದಿಲ್ಲ. " ನ ಶಾಂತೇಃ ಪರಮಂ ಸುಖಂ." ಈ ಶಾಂತಿ ದೊರೆಯಬೇಕಾದರೆ, ಕೋಪ ಹೋಗಬೇಕು. ಕೋಪಗೊಳ್ಳದಿರುವುದೇ ಬುದ್ಧಿಯ ಫಲ: "ಬುದ್ಧೇಃ ಫಲಮನಾಗ್ರಹಂ."

ನಿತ್ಯಜೀವನಕ್ಕೆ ಸಂಬಂಧಿಸಿದ ಅನುಭವಸಿದ್ಧವಾದ ಮತ್ತು ಸತ್ಯವನ್ನು ಪ್ರಕಟಿಸುವ ಇಂತಹ ನೀತಿವಾಕ್ಯಗಳು ಅನೇಕವಾಗಿವೆ.

**“ ಸರ್ವಶೂನ್ಯಾ ದರಿದ್ರತಾ ”**

ದರಿದ್ರಾವಸ್ಥೆಯಲ್ಲಿ ಎಲ್ಲವೂ ಶೂನ್ಯ.

**“ ಕಷ್ಟಂ ಖಲು ಪರಾಶ್ರಯಃ ”**

ಇತರರನ್ನು ಆಶ್ರಯಿಸುವುದು ಕಷ್ಟವೇ ಸರಿ.

**“ ಪರದುಃಖೇನಾಪಿ ದುಃಖಿತಾ ವಿರಲಾಃ ”**

ಇತರರ ದುಃಖದಿಂದ ದುಃಖಗೊಳ್ಳುವವರು ತೀರ ಕಡಿಮೆ.

**“ ನಾಸ್ತಿ ತೃಷ್ಣಾಸಮೋ ವ್ಯಾಧಿಃ ”**

ಆಶೆಗೆ ಸಮನಾದ ಜಾಡ್ಯವಿಲ್ಲ.

**“ ಮನೀಷಿಣಸ್ಸಂತಿ ನ ತೇ ಹಿತೈಷಿಣಃ ”**

ವಿದ್ವಾಂಸರಿದ್ದಾರೆ, ಆದರೆ ಆವರು ಹಿತೈಷಿಗಳಲ್ಲ.

———



# ೩. ಕೆಲವು ಸುಭಾಷಿತಗಳು

ನಮ್ಮ ಜೀವನಕ್ಕೆ ಅನ್ವಯಿಸುವ ಸನ್ನಿವೇಶಗಳು, ವ್ಯಕ್ತಿಗಳು ಭಾವಗಳು ಇವುಗಳವಿಷಯದಲ್ಲಿ ಹೇಳಿರುವ ಮತ್ತುನಮ್ಮ ಸುತ್ತ ಮುತ್ತಲ ಪ್ರಪಂಚವನ್ನು ಚಿತ್ರಿಸಿರುವ, ಜೀವನದ ಅನುಭವಕ್ಕೆ ಒಂದು ಹೊಸರೂಪನ್ನೂ ಸಂಸ್ಕಾರವನ್ನೂ ಕೊಟ್ಟಿರುವ ಕೆಲವು ಪದ್ಯಗಳನ್ನು ಮೇಲಿನ ಸುಭಾಷಿತಸಂಗ್ರಹಗಳಿಂದ ಇಲ್ಲಿ ಎತ್ತಿ ಕೊಡಲಾಗಿದೆ. ಈ ಸಂಗ್ರಹಗಳಲ್ಲಿ ಕಂಡುಬರುವ ಉತ್ತಮ ವಾದ ಎಲ್ಲ ಪದ್ಯಗಳನ್ನಾಗಲಿ ಅಥವಾ ಎಲ್ಲ ವಿಷಯಗಳಿಗೂ

ಅನ್ವಯಿಸುವ ಪದ್ಯಗಳನ್ನಾಗಲಿ ಆರಿಸಿಡುವುದು ಆಗದ ಕೆಲಸ. ಪ್ರತಿಯೊಂದು ಪದ್ಯದ ಕೆಳಗೂ ಅದು ಯಾವ ಸಂಗ್ರಹಗ್ರಂಥ ದಲ್ಲಿನದು ಎಂಬುದನ್ನು ತಿಳಿಸಿದೆ; ಅದು ಯಾವ ಕವಿಯದು ಎಂಬುದನ್ನು ಸಾಧ್ಯವಿದ್ದ ಕಡೆ ಕೊಟ್ಟಿದೆ.

**ಸತ್ಪುರುಷರು—**

**ಪರಪರಿವಾದೇ ಮೂಕಃ ಪರನಾರೀದರ್ಶನೇಽಪಿ ಜಾತ್ಯಂಧಃ ।**
**ಪಂಗುಃ ಪರಧನಹರಣೇ ಸ ಜಯತಿ ಲೋಕೇ ಮಹಾಪುರುಷಃ ॥**
(ಸು. ವ.)

ಇತರರನ್ನು ದೂಷಿಸುವ ಸಂದರ್ಭದಲ್ಲಿ ಮೂಕರು, ಪರ ಸ್ತ್ರೀಯರು ಕಣ್ಣಿಗೆ ಬಿದ್ದಾಗ ಹುಟ್ಟು ಕುರುಡರು. ಇತರರ ಹಣ ವನ್ನು ಅಪಹರಿಸುವುದರಲ್ಲಿ ಹೆಳವರು. ಲೋಕದಲ್ಲಿ ಇಂಥಾ ಮಹಾಪುರುಷರು ಸರ್ವೋತ್ತಮರಾಗಿರುವರು.

**ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।**
**ಲೋಕೋತ್ತರಾಣಾಂ ಚೇತಾಂಸಿ ಕೋ ಹಿ ವಿಜ್ಞಾತುಮರ್ಹತಿ॥**
ಭವಭೂತಿ (ಶಾ.ಪ.)

ಸಜ್ಜನರ ಮನಸ್ಸು ಒಮ್ಮೆ ವಜ್ರಕ್ಕಿಂತಲೂ ಕಠಿನ. ಇನ್ನೊಮ್ಮೆ ಹೂವಿಗಿಂತಲೂ ಮೃದು. ಅವರ ಮನಸ್ಸು ಲೋಕೋತ್ತರವಾದುದು. ಅದನ್ನು ತಿಳಿಯಬಲ್ಲವರಾರು?

ಸತ್ಪುರುಷರ ದಿನಚರಿ ಹೀಗೆ—

**ನಮ್ರತ್ವೇನೋನ್ನಮಂತಃ ಪರಗುಣನುತಿಭಿಸ್ಸ್ವಾನ್ ಗುಣಾನ್ ಖ್ಯಾಪಯಂತಃ**
**ಪುಷ್ಣಂತಃ ಸ್ವೀಯಮರ್ಥಂ ಸತತಕೃತಮಹಾರಂಭಯತ್ನಾಃ ಪರಾರ್ಥೇ ॥**

**ಕ್ಷಾಂತ್ಯೈವಾಕ್ಷೇಪರೂಕ್ಷಾಕ್ಷರಮುಖರಮುಖಾನ್**
**ದುರ್ಮುಖಾನ್ ದುಃಖಯಂತಃ**
**ಸಂತಸ್ಸಾಶ್ಚರ್ಯಚರ್ಯಾ ಜಗತಿ ಬಹುಮತಾಃ ಕಸ್ಯ ನಾಭ್ಯರ್ಥ**
**ನೀಯಾಃ ॥**
(ಸು. ವ.)

ಸಜ್ಜನರು, ತಾವು ತಗ್ಗಿ ನಡೆದು, ತಮ್ಮ ಹಿರಿಮೆಯನ್ನು ತೋರಿಸುತ್ತಾರೆ. ಇತರರ ಗುಣಗಳನ್ನು ಹೊಗಳಿ ತಮ್ಮ ಗುಣಗಳನ್ನು ಪ್ರಕಾಶಪಡಿಸುತ್ತಾರೆ. ಇತರರ ಸುಖಕ್ಕೋಸ್ಕರ ಸಂತತವಾಗಿ ಪ್ರಯತ್ನಮಾಡಿ, ಆದರಿಂದ ತಮ್ಮ ಅರ್ಥವನ್ನು ಸಂಪಾದಿಸಿಕೊಳ್ಳುತ್ತಾರೆ. ಮೂರು ಹೊತ್ತೂ ಕಠಿನವಾಗಿ ಆಕ್ಷೇಪಣೆ ಮಾಡುವ ಜನರನ್ನು ಕ್ಷಮೆಯಿಂದಲೇ ದುಃಖಗೊಳಿಸುತ್ತಾರೆ. ಸತ್ಪುರುಷರ ಇಂತಹ ಚರ್ಯೆಗಳು ಯಾರಿಗೆ ತಾನೇ ಆಶ್ಚರ್ಯವನ್ನುಂಟುಮಾಡುವುದಿಲ್ಲ? ಯಾರು ತಾನೇ ಅವರನ್ನು ಬಯಸರು ?

**ಮೂರ್ಖರು**—

ಸತ್ಪುರುಷರನ್ನು ಹೊಗಳಿರುವಂತೆಯೇ ಕವಿಗಳು ಮೂರ್ಖರನ್ನು ತೆಗಳಿದ್ದಾರೆ. ಮೂರ್ಖರನ್ನು ಸರಿಯಾದ ಮಾರ್ಗಕ್ಕೆ ತರುವುದು ಸಾಧ್ಯವಲ್ಲ. ಅವರಿಗೆ ಮಾಡುವ ಉಪದೇಶ ನಿಷ್ಫಲ :

**ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ**
**ಶಾಂತಯೇ ।**
**ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ ॥**
**ಚಾಣಕ್ಯ** (ಶಾ. ಪ.)

ಮೂರ್ಖರಿಗೆ ಮಾಡುವ ಉಪದೇಶದಿಂದ ಅವರ ಕೋಪ

ಹೆಚ್ಚುತ್ತದೆಯೇ ಹೊರತು ಶಾಂತಿ ಬಾರದು. ಹಾವಿಗೆರೆದ ಹಾಲು ಅದರ ವಿಷವನ್ನು ಹೆಚ್ಚಿಸುವಂತೆಯೇ ಇದು.

ಸಾಮಾನ್ಯವಾಗಿ ಶಾಸ್ತ್ರಜ್ಞಾನವು ಜನರಿಗೆ ತಿಳಿವಳಿಕೆಯನ್ನುಂಟುಮಾಡಿ ಒಳ್ಳೆಯ ಕೆಲಸಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತದೆ. ಮೂರ್ಖರಿಗೆ ಹಾಗಾಗದು :

**ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ ।**
**ಲೋಚನಾಭ್ಯಾಂ ವಿಹೀನಸ್ಯ ದರ್ಪಣಃ ಕಿಂ ಕರಿಷ್ಯತಿ ॥**

**ಚಾಣಕ್ಯ** (ಶಾ. ಪ.)

ಕಣ್ಣಿಲ್ಲದವನಿಗೆ ಕನ್ನಡಿ ಏನೂ ಉಪಯೋಗವಿಲ್ಲ. ಹಾಗೆಯೇ ಸ್ವತಃ ತಿಳಿವಿಲ್ಲದವನಿಗೆ ಶಾಸ್ತ್ರ ಏನುಮಾಡಬಲ್ಲದು ?

**ನಡೆ ಮತ್ತು ನುಡಿ** –

ಹಿಂದಿನಿಂದಲೂ, ನಮ್ಮ ನಡೆನುಡಿಗೆ ಹಿರಿಯರು ಪ್ರಾಮುಖ್ಯ ಕೊಟ್ಟಿದ್ದಾರೆ. ಮನುಷ್ಯರ ನಡೆ ನುಡಿಗಳಿಂದಲೇ ಅವರ ಹೃದಯವನ್ನು ಅರಿಯಬಹುದು. ಈ ಸದಾಚಾರವನ್ನು ಬೋಧಿಸುವ ನೀತಿವಾಕ್ಯಗಳು ಈ ಸಂಗ್ರಹಗಳಲ್ಲಿ ಅನೇಕ ಇವೆ.

**ಉಪಕಾರಃ ಪರೋ ಧರ್ಮಃ ಪರೋಽರ್ಥಃ ಕರ್ಮನೈಪುಣಂ ।**
**ಪಾತ್ರೇ ದಾನಂ ಪರಃ ಕಾಮಃ ಪರೋ ಮೋಕ್ಷೋ ವಿತೃಷ್ಣತಾ ॥**

(ಸು. ರ. ಭಾ.)

ಇತರರಿಗೆ ಉಪಕಾರಮಾಡುವುದೇ ಶ್ರೇಷ್ಠವಾದ ಧರ್ಮ; ಕೊಟ್ಟ ಕೆಲಸವನ್ನು ಕೌಶಲದಿಂದ ನಡೆಸುವುದೇ ಶ್ರೇಷ್ಠವಾದ ಅರ್ಥ; ಸತ್ಪಾತ್ರದಲ್ಲಿ ದಾನ ಮಾಡುವುದೇ ಶ್ರೇಷ್ಠವಾದ ಕಾಮ; ಆಶೆಯಿಲ್ಲದಿರುವುದೇ ಶ್ರೇಷ್ಠವಾದ ಮೋಕ್ಷ.

**ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।**
**ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥**

ವ್ಯಾಸ (ಶಾ. ಪ.)

ನಮ್ಮ ಹಿತಕ್ಕೆ ಪ್ರತಿಕೂಲವಾದುದೆಂದು ಯಾವುದನ್ನು ಭಾವಿಸುತ್ತೇವೆಯೋ, ಅಂತಹುದನ್ನು ಇತರರ ವಿಷಯದಲ್ಲಿ ಆಚರಿಸಬಾರದು. ಕೇಳು, ಇದೇ ಸರ್ವಧರ್ಮದ ಸಾರ; ಕೇಳುವುದಲ್ಲದೆ ಅದರಂತೆ ನಡೆ.

**ಅಹಿಂಸಾ ಸತ್ಯವಚನಂ ಸರ್ವಭೂತಾನುಕಂಪನಂ ।**
**ಶಮೋದಾನಂ ಯಥಾಶಕ್ತಿ ಗಾರ್ಹಸ್ಥೋ ಧರ್ಮ ಉಚ್ಯತೇ ॥**

(ಶಾ. ಪ.)

ಅಹಿಂಸೆ, ಸತ್ಯವಾಕ್ಕು, ಎಲ್ಲ ಪ್ರಾಣಿಗಳಲ್ಲಿಯೂ ದಯೆ, ಶಾಂತಿ, ಶಕ್ತಿಯಿದ್ದಷ್ಟು ದಾನ, ಇವೇ ಗೃಹಸ್ಥಧರ್ಮ. ಎಲ್ಲ ಸಂಸಾರಿಗಳೂ ಹೀಗೆ ವರ್ತಿಸಿದರೆ, ಭೂಮಿಯು ದೇವತೆಗಳ ಆವಾಸಕ್ಕೆ ಯೋಗ್ಯವಾದೀತು.

**ಅಕೃತ್ವಾ ಪರಸಂತಾಪಮಗತ್ವಾ ಖಲನಮ್ರತಾಂ ।**
**ಅನುತ್ಸೃಜ್ಯ ಸತಾಂ ವರ್ತ್ಮ ಯತ್ಸ್ವಲ್ಪಮಪಿ ತದ್ಬಹು ॥**

ವ್ಯಾಸ (ಶಾ. ಪ.)

ಇತರರ ಮನಸ್ಸನ್ನು ನೋಯಿಸದೆ ನೀಚರಿಗೆ ತಲೆಬಾಗದೆ ಸಜ್ಜನರ ಮಾರ್ಗವನ್ನು ಬಿಡದೆ ಗಳಿಸಿದ್ದು ಅಲ್ಪವಾದರೂ ಅದೇ ಬಹಳವಾಗುತ್ತದೆ.

**ದಾರಿದ್ರ್ಯ—**

ಒಳ್ಳೆಯ ಕುಲದಲ್ಲಿ ಹುಟ್ಟಿ ರೂಪು ವಿದ್ಯೆಗಳಿಂದ ಕೂಡಿರು

ವವರೂ ದಾರಿದ್ರ್ಯಕ್ಕೆ ಸಿಕ್ಕಿ ನರಳುತ್ತಾರೆ. ಅಂತಹವರಲ್ಲೇ ಬಡತನ ಹೆಚ್ಚು.

**ಪರೀಕ್ಷ್ಯ ಸತ್ಕುಲಂ ವಿದ್ಯಾಂ ಶೀಲಂ ಶೌರ್ಯಂ ಸುರೂಪತಾಂ ।**
**ವಿಧಿರ್ದದಾತಿ ನಿಪುಣಃ ಕನ್ಯಾಮಿವ ದರಿದ್ರತಾಂ ॥** (ಶಾ.ಪ.)

ಕುಲ, ವಿದ್ಯೆ, ಶೀಲ, ಪರಾಕ್ರಮ, ಸೌಂದರ್ಯಗಳನ್ನು ಪರೀಕ್ಷಿಸಿ ಹೆಣ್ಣನ್ನು ಕೊಡುವಂತೆ ವಿಧಿಯು ದಾರಿದ್ರ್ಯವನ್ನು ಕೊಡುತ್ತಾನೆ.

ಇದೊಂದು ಕಡುಬಡತನದ ಚಿತ್ರ:

**ವೃದ್ಧೋಽಂಧಃ ಪತಿರೇಷ ಮಂಚಕಗತಃ ಸ್ಥೂಣಾವಶೇಷಂ ಗೃಹಂ**
**ಕಾಲೋಽಭ್ಯರ್ಣಜಲಾಗಮಃ ಕುಶಲಿನೀ ವತ್ಸಸ್ಯ ವಾರ್ತಾಪಿ ನ ॥**
**ಯತ್ನಾತ್ಸಂಚಿತತೈಲಬಿಂದುಘಟಿಕಾ ಭಗ್ನೇತಿ ಪರ್ಯಾಕುಲಾ ।**
**ದೃಷ್ಟ್ವಾ ಗರ್ಭಭರಾಲಸಾಂ ನಿಜವಧೂಂ ಶ್ವಶ್ರೂಶ್ಚಿರಂ ರೋದಿತಿ ॥** (ಶಾ. ಪ).

ಗಂಡ ಮುದುಕ, ಕುರುಡ; ಅದರ ಜತೆಗೆ ರೋಗಗ್ರಸ್ತನಾಗಿ ಮುರುಕುಮಂಚದ ಮೇಲೆ ಮಲಗಿದ್ದಾನೆ. ವಾಸ ಮಾಡುತ್ತಿರುವ ಮನೆಗೆ ಮೇಲ್ಛಾವಣಿಯೇ ಇಲ್ಲ. ಬರಿ ಕಂಬಗಳು ಮಾತ್ರ ನಿಂತಿವೆ. ಮಳೆಗಾಲ ಬೇರೆ ಕಾಲಿಡುತ್ತಿದೆ. ಇರುವನು ಒಬ್ಬನೇ ಮಗ; ಅವನು ಜೀವನಸಂಪಾದನೆಗಾಗಿ ದೇಶಾಂತರಕ್ಕೆ ಹೋಗಿದ್ದಾನೆ. ಅವನಿಂದ ಕುಶಲವಾರ್ತೆ ಕೂಡ ಬಂದಿಲ್ಲ. ಸೊಸೆ ಗರ್ಭಿಣಿ; ಮನೆಮನೆಗೂ ಅಲೆದು ಒಂದೊಂದು ಬಿಂದುವಿನಂತೆ ಕೂಡಿಸಿದ್ದ ಎಣ್ಣೆಯ ಮಡಕೆ ಒಡೆದು ಹೋಯಿತು. ಇಂತಹ ಸ್ಥಿತಿಯಲ್ಲಿ ಆಲಸ್ಯಗೊಂಡ ಗರ್ಭಿಣಿ ಸೊಸೆಯನ್ನು ಅತ್ತೆ ಕಂಡು ಸುಮ್ಮನೆ ಅಳುತ್ತಿದ್ದಾಳೆ.

ಹೃದಯವನ್ನು ಕರಗಿಸುವ ಇನ್ನೊಂದು ಪದ್ಯ :

**ಉತ್ತಿಷ್ಠ ಕ್ಷಣಮೇಕ ಮುದ್ವಹಸಖೇ ದಾರಿದ್ರ್ಯಭಾರಂ ಮಮ**
**ಶ್ರಾನ್ತಸ್ತಾವದಹಂ ಚಿರಾನ್ಮರಣಜಂ ಸೇವೇ ತ್ವದೀಯಂ ಸುಖಂ ।**
**ಇತ್ಯುಕ್ತಂ ಧನವರ್ಜಿತಸ್ಯ ವಿದುಷಃ ಶ್ರುತ್ವಾ ಶ್ಮಶಾನೇ ಶವಃ**
**ದಾರಿದ್ರ್ಯಾನ್ಮರಣಂ ವರಂ ವರಮಿತಿ ಜ್ಞಾತ್ವೇವ ತೂಷ್ಣೀಂ**
**ಸ್ಥಿತಃ ॥** (ಸು. ರ. ಭ.)

"ಸಖನೇ! ಏಳು, ಒಂದೇ ಒಂದು ಕ್ಷಣ ನನ್ನ ಬಡತನದ ಭಾರವನ್ನು ಹೊತ್ತುಕೊ; ಇದನ್ನು ಬಹುಕಾಲದಿಂದ ಹೊತ್ತು ದಣಿದಿದ್ದೇನೆ. ಮರಣದಿಂದ ಉಂಟಾದ ನಿನ್ನ ಸುಖವನ್ನು ಅನುಭವಿಸುತ್ತೇನೆ." ಧನಹೀನನಾದ ವಿದ್ವಾಂಸನ ಈ ಮಾತನ್ನು ಶ್ಮಶಾನದಲ್ಲಿನ ಶವ ಕೇಳಿ "ಬಡತನಕ್ಕಿಂತ ಮರಣವೇ ಲೇಸು;" ಎಂಬುದನ್ನು ತಿಳಿದಿದೆಯೋ ಎಂಬಂತೆ ಸುಮ್ಮನೆ ಇದ್ದುಬಿಟ್ಟಿತು.

**ಸೇವೆ**—

**ಭೇತವ್ಯಂ ನೃಪತೇಸ್ತತಸ್ಸಚಿವತೋ ರಾಜ್ಞಸ್ತತೋ ವಲ್ಲಭಾ-**
**ದನ್ಯೇಭ್ಯಶ್ಚ ಭವನ್ತಿಯೇ ಚ ಭವನೇ ಲಬ್ಧಪ್ರತಿಷ್ಠಾ ವಿಟಾಃ ।**
**ದೈನ್ಯಾದುನ್ಮುಖದರ್ಶನಾಪಲಪನೈಃ ಪಿಂಡಾರ್ಥಮಾಯಸ್ಯತಃ**
**ಸೇವಾಂ ಲಾಘವಕಾರಿಣೀಂ ಕೃತಧಿಯಸ್ಸ್ಥಾನೇ ಶ್ವವೃತ್ತಿಂ ವಿದುಃ**
**ವಿಶಾಖದತ್ತ (ಸೂ. ಮು.)**

**ಮೊದಲು ದೊರೆಗೆ ಹೆದರಬೇಕು, ಆಮೇಲೆ ಮಂತ್ರಿಗಳಿಗೆ; ಅನಂತರ ದೊರೆಗೆ ಬೇಕಾದವರಿಂದ ಭಯ. ಅಷ್ಟೇ ಅಲ್ಲ; ಅವರ ಮನೆಯಲ್ಲಿದ್ದುಕೊಂಡು ಪ್ರತಿಷ್ಠಿತರಾದ ವಿಟರು ಬೇರೆ ಹೆದರಿಸುವರು. ದೈನ್ಯದಿಂದ ಮೇಲೆ ನೋಡುತ್ತಾ ಹೊಟ್ಟೆಹೊರೆದುಕೊಳ್ಳುವುದಕ್ಕಾಗಿ ಮಾಡುವ ಈ ಸೇವೆ ಮಾನವನನ್ನು ಬೆಲೆ**

ಯಿಲ್ಲದಂತೆ ಮಾಡುತ್ತದೆ. ಆದ್ದರಿಂದಲೇ ಬಲ್ಲವರು ಸೇವೆಯನ್ನು ನಾಯಿಬಾಳು ಎಂದರು.

**ವಸಂತ—**

ವಸಂತ ಋತುಗಳಿಗೆ ರಾಜ. ವಸಂತದಿನಗಳು ಮನೋಹರವಾಗಿರುತ್ತವೆ. ಇವುಗಳನ್ನು ಕವಿಯೊಬ್ಬನು ಹೀಗೆ ಬಣ್ಣಿಸಿದ್ದಾನೆ.

**ಮಂದಂ ದಕ್ಷಿಣಮಾಹ್ವಯಂತಿ ಪವನಂ ಪುಂಸ್ಕೋಕಿಲವ್ಯಾಹೃತೈಃ**
**ಸಂಸ್ಕುರ್ವಂತಿ ವನಸ್ಥಲೀಃ ಕಿಸಲಯೋತ್ತಂಸೈರ್ನಿಷಣ್ಣಾಲಿಭಿಃ ॥**
**ಚಂದ್ರಂ ಸುಂದರಯಂತಿ ಮುಕ್ತತುಹಿನಪ್ರಾವಾರಯಾ ಜ್ಯೋತ್ಸ್ನಯಾ**
**ವರ್ಧನ್ತೇ ಚ ವಿವರ್ಧಯಂತಿ ಚ ಮುಹುಸ್ತೇಽಮೀ ಸ್ಮರಂ ವಾಸರಾಃ ॥** (ಕ. ವ. ಸ.)

ಇಲ್ಲಿ ವಸಂತದಿನಗಳು ತಮ್ಮ ಪ್ರಿಯ ಸಖನಾದ ದಕ್ಷಿಣಾನಿಲನನ್ನು ಆಹ್ವಾನಿಸುವಂತೆ ಕವಿಯ ಉತ್ಪ್ರೇಕ್ಷೆ. ವಸಂತದಿನಗಳು ಗಂಡುಕೋಗಿಲೆಗಳ ಮನೋಹಾರಿಯಾದ ದನಿಯ ಮೂಲಕ ತಮ್ಮ ಪ್ರಿಯ ಮಿತ್ರನನ್ನು ಕರೆಯುತ್ತವೆ. ಉತ್ಸವ ಕಾಲದಲ್ಲಿ ಮನೆಗಳನ್ನು ಧ್ವಜಪತಾಕೆಗಳಿಂದ ಸಿಂಗರಿಸುವಂತೆ ತಳಿರುತೋರಣಗಳಿಂದ ಅಲಂಕರಿಸುವಂತೆ, ವಸಂತದಿನಗಳು ಎಳಸಾದ ಕೆಂಬಣ್ಣದ ಚಿಗುರುಗಳಿಂದಲೂ, ದುಂಬಿಗಳಿಂದಲೂ ವನಸ್ಥಲಗಳನ್ನು ಅಲಂಕರಿಸಿವೆ. ಈ ಚಿಗುರುಗಳಲ್ಲಿ ದುಂಬಿಗಳು ಬೇರೆ ನೆಲಸಿವೆ. ಮಂಜಿಲ್ಲದಿರುವುದರಿಂದ ಬೆಳದಿಂಗಳು ಚಂದ್ರನ ಸೌಂದರ್ಯವನ್ನು ಹೆಚ್ಚಿಸಿದೆ. ಹೀಗೆ ವಸಂತ ದಿನಗಳು ಬೆಳೆಯುತ್ತ ಸ್ಮರನನ್ನು ಬೆಳಸುತ್ತ ಹೋಗುತ್ತವೆ.

## ಗ್ರೀಷ್ಮ—

**ಸುಭಗಸಲಿಲಾವಗಾಹಾಃ ಪಾಟಲಸಂಸರ್ಗಸುರಭಿವನವಾತಾಃ ।**
**ಪ್ರಚ್ಛಾಯಸುಲಭನಿದ್ರಾಃ ದಿವಸಾಃ ಪರಿಣಾಮರಮಣೀಯಾಃ॥**

**ಕಾಲಿದಾಸ (ಸು. ವ.)**

ಗ್ರೀಷ್ಮರ್ತುವಿನಲ್ಲಿ ನೀರು ಜಲಕ್ರೀಡೆಗೆ ಹಿತವಾಗಿರುತ್ತದೆ. ಗಾಳಿ ಪಾದರಿಯ ಕಂಪಿನಿಂದ ಕೂಡಿರುತ್ತದೆ. ನೆರಳು ನಿದ್ದೆಗೆ ಸೌಲಭ್ಯವನ್ನು ಕಲ್ಪಿಸುತ್ತದೆ. ಸಂಜೆ ಬಹು ರಮಣೀಯವಾಗಿರುತ್ತದೆ.

## ವರ್ಷಾಕಾಲ—

ವಸಂತವು ಮನೋಹಾರಿಯಾದ ಋತುವಾದರೆ ಪ್ರಾವೃಟ್ಕಾಲ ಪ್ರೀತಿದಾಯಕವಾದುದು.

**ಅಲಕೇಷು ಚೂರ್ಣಭಾಸಃ ಸ್ವೇದಲವಾಭಾನ್ ಕಪೋಲ**
**ಫಲಕೇಷು ।**
**ನವಘನಕೌತುಕಿನೀನಾಂ ವಾರಿಕಣಾನ್ ಪಶ್ಯತಿ ಕೃತಾರ್ಥಃ ॥**

**(ಕ. ವ. ಸ.)**

ಹೊಸ ಮೋಡಗಳನ್ನು ನೋಡಲು ಆಸೆಯಿಂದ ಯುವತಿಯರು ಹೊರಗೆ ಬಂದು ತಲೆಯೆತ್ತಿ ನೋಡುತ್ತ ನಿಂತರು. ಆಗ ತಟ್ಟನೆ ಮಳೆಹನಿಗಳು ಅವರ ಮೇಲೆ ಸುರಿದವು. ಈ ಹನಿಗಳು ಆ ರಮಣಿಯರ ಮುಂಗುರುಳ ಮೇಲೆ ಅಲಂಕಾರ ವಿಧಿಗಾಗಿ ಉಪಯೋಗಿಸುವ ಪರಾಗದಂತೆಯೂ, ಕೆನ್ನೆಗಳ ಮೇಲಿನ ಬೆವರು ಹನಿಗಳಂತೆಯೂ ನಿಂತವು. ಇದನ್ನು ನೋಡುವವನು ಕೃತಾರ್ಥನು.

ವರ್ಷಾಕಾಲವು ಹೀಗೆ ಕೆಲವು ಮಂದಿಗೆ ಪ್ರಿಯವಾದರೆ, ವಿರಹಿಣಿಯರಿಗೆ, ಅದರಲ್ಲೂ ಪ್ರೋಷಿತಭರ್ತೃಕೆಯರಿಗೆ (ದೂರ ದೇಶಪ್ರವಾಸ ಹೋಗಿರುವವರ ಪತ್ನಿಯರಿಗೆ) ಅತ್ಯಂತ ದುಃಖ ವನ್ನುಂಟುಮಾಡುತ್ತದೆ :

**ಧೂಲೀಭಿಃ ಕೇತಕೀನಾಂ ಪರಿಮಲನಸಮುದ್ಧೂಲಿತಾಂಗಃ ಸಮಂತಾ-**
**ದಂತೋದ್ವೇಲ್ಲದ್ಬಲಾಕಾವಲಿ ಕುಣಪಶಿರೋನದ್ಧ ನೀಲಾಭ್ರಕೇಶಃ ॥**
**ಪ್ರೇಂಖದ್ವಿದ್ಯುತ್ಪತಾಕಾವಲಿ ರುಚಿರಧನುಃ ಖಂಡಖಟ್ವಾಂಗ ಧಾರೀ**
**ಸಂಪ್ರಾಪ್ತಃ ಪ್ರೋಷಿತಸ್ತ್ರೀಪ್ರತಿಭಯಜನಕಃ ಕಾಲಕಾಪಾಲಿ ಕೋಯಂ ॥**

ಅಭಿನಂದ (ಕ. ವ. ಸ.)

ಕೇದಗೆಗಳ ಬಿಳಿಯ ಧೂಳು ಕಾಪಾಲಿಕನನ್ನು ಸುತ್ತು ಗಟ್ಟಿರುವ ಭಸ್ಮರಾಶಿ. ಬಲಾಕಾವೃತವಾದ ಕಾರ್ಮೋಡಗಳು ರುಂಡಗಳಿಂದ ಅಲಂಕರಿಸಿದ ಅವನ ಕೇಶರಾಶಿ. ಮಳೆಬಿಲ್ಲಿ ನಿಂದ ಏಳುವ ಮಿಂಚಿನ ಅಲೆಗಳು ಪತಾಕೆಯಿಂದ ಕೂಡಿದ ಅವನ ಖಟ್ವಾಂಗ. ಇಂತಹ ಮಳೆಗಾಲವೆಂಬ ಈ ಕಾಪಾಲಿಕನು ಪ್ರೋಷಿತಭರ್ತೃಕೆಯರಿಗೆ ಭಯವನ್ನುಂಟುಮಾಡುತ್ತಾನೆ.

## ಸೂರ್ಯಾಸ್ತ—

ರಾತ್ರಿಯಹೊತ್ತು ಚಕ್ರವಾಕಪಕ್ಷಿಗಳು ಒಟ್ಟಾಗಿರುವುದಿಲ್ಲ. ಸಂಜೆಯಾಯಿತೆಂದರೆ ಅವು ತಮ್ಮ ಪ್ರಿಯರಿಂದ ಅಗಲಬೇಕು. ಈ ವಿಯೋಗಕಾಲದಲ್ಲಿ ಚಕ್ರವಾಕಿಗಳಿಗೆ ಒಂದು ಕಡೆ ವ್ಯಥೆ, ಇನ್ನೊಂದು ಕಡೆ ಸೂರ್ಯನ ಮೇಲೆ ಕೋಪ.

**ಏಕೇನಾಕ್ಷ್ಣಾ ಪರಿಣತರುಷಾ ಪಾಟಲೇನಾಸ್ತಸಂಸ್ಥಂ
ಪಶ್ಯತ್ಯರ್ಕಂ ಕುಮುದವಿಶದೇನಾಪರೇಣ ಸ್ವಕಾಂತಂ ॥
ಅಹ್ನಶ್ಛೇದೇ ದಯಿತವಿರಹಾಶಂಕಿನೀ ಚಕ್ರವಾಕೀ
ದ್ವೌ ಸಂಕೀರ್ಣೌ ರಚಯತಿ ರಸೌ ನರ್ತಕೀವ ಪ್ರಗಲ್ಭಾ ॥**

ಚಂದ್ರಕ (ಸು. ವ.)

ಸಂಜೆಯಹೊತ್ತು ತನ್ನ ಪ್ರಿಯನಿಂದ ಅಗಲಬೇಕಾದ ಶಂಕೆಯೊದಗಿ ಚಕ್ರವಾಕಪಕ್ಷಿಯೊಂದು ಕೋಪದಿಂದ ಕೆಂಪಾದ ತನ್ನ ಒಂದು ಕಣ್ಣಿನಿಂದ ಅಸ್ತಮಿತನಾಗುತ್ತಿರುವ ಸೂರ್ಯನನ್ನು ನೋಡುತ್ತಿದೆ. ಕನ್ನೈದಿಲೆಯಂತೆ ಅರಳಿದ ಇನ್ನೊಂದು ಕಣ್ಣಿನಿಂದ ತನ್ನ ಕಾಂತನನ್ನು ನೋಡುತ್ತಿದೆ. ಹೀಗೆ ಒಂದುಕಡೆ ವ್ಯಥೆಯಿಂದ ಕೂಡಿದ ಕೋಪ; ಇನ್ನೊಂದು ಕಡೆ ಅನುರಾಗ; ಇವೆರಡನ್ನೂ ಪ್ರೌಢಳಾದ ನರ್ತಕಿ ಎರಡೆರಡು ರಸಗಳನ್ನು ಏಕಕಾಲದಲ್ಲಿ ರಚಿಸುವಂತೆ ತೋರಿಸುತ್ತಿದೆ.

**ಮೃಗಪಕ್ಷಿಗಳು—**

ಸಿಂಹ :

**ನಾಭಿಷೇಕೋ ನ ಸಂಸ್ಕಾರಃ ಸಿಂಹಸ್ಯ ಕ್ರಿಯತೇ ವನೇ ।
ವಿಕ್ರಮಾರ್ಜಿತಸತ್ವಸ್ಯ ಸ್ವಯಮೇವ ಮೃಗೇಂದ್ರತಾ ॥**

(ಸು. ವ.)

ಸಿಂಹಕ್ಕೆ ಯಾರೂ ಸಂಸ್ಕಾರಮಾಡಿ ಪಟ್ಟಕಟ್ಟಲಿಲ್ಲ. ತನ್ನ ಪರಾಕ್ರಮದಿಂದ ಗೆದ್ದು ವನಪ್ರಪಂಚದಲ್ಲಿ ಅದು ಮೃಗಗಳಿಗೆಲ್ಲ ಅಧಿಪತಿಯಾಗಿದೆ. ಇದು ಸಿಂಹಕ್ಕೆ ಸ್ವತಸ್ಸಿದ್ಧವಾಗಿ ಬಂದಿದೆ.

**ಆನೆ :**

ಸಿಂಹಕ್ಕೆ ಪರಾಕ್ರಮ ಹುಟ್ಟುಗುಣವಾದರೆ, ಗಾಂಭೀರ್ಯ

ಆನೆಯ ನೈಜವಾದ ಗುಣ. ಗಾಂಭೀರ್ಯಕ್ಕೆ ತಕ್ಕ ಬಲವೂ ಅದರಲ್ಲಿದೆ.

**ನೀವಾರಪ್ರಸರಾಗ್ರಮುಷ್ಟಿಕವಲೈರ್ಯೋ ವರ್ಧಿತಶ್ಶೈಶವೇ**
**ಪೀತಂ ಯೇನ ಸರೋಜಪತ್ರಪುಟಕೇ ಹೋಮಾವಶೇಷಂ**
**ಪಯಃ ॥**
**ತಂ ದೃಷ್ಟ್ವಾ ಮದಮಂಥರಾಲಿವಲಯವ್ಯಾಲುಪ್ತಗಂಡಂ ಗಜಂ**
**ಸೋತ್ಕಂಠಂ ಸಭಯಂ ಚ ಪಶ್ಯತಿ ಮುಹುರ್ದೂರೇಸ್ಥಿತ**
**ಸ್ತಾಪಸಃ ॥** ಮುಕ್ತಾಪೀಡ (ಸು. ವ.)

ಒಬ್ಬ ಆಶ್ರಮವಾಸಿ ಬಹುದಿನಗಳಿಂದ ಆನೆಯೊಂದನ್ನು ಪುತ್ರ ನಿರ್ವಿಶೇಷವಾತ್ಸಲ್ಯದಿಂದ ಬೆಳೆಸಿಕೊಂಡುಬಂದಿದ್ದಾನೆ. ಆನೆಯು ಇನ್ನೂ ಪುಟ್ಟದಾಗಿದ್ದಾಗ, ಎಳೆಯ ನೀವಾರದ ಹುಲ್ಲನ್ನು ತಂದು ಅದರ ಬಾಯಿಗಿಟ್ಟು ತಿನ್ನಿಸುವುದು, ತನ್ನ ಹೋಮ ಕಾರ್ಯಗಳಿಗಾಗಿ ಉಳಿದ ಆಕಳ ಹಾಲನ್ನು ತಾವರೆಯೆಲೆಯ ದೊನ್ನೆಯಲ್ಲಿ ಹಾಕಿ ಕುಡಿಸುವುದು, ಹೀಗೆ ಬೆಳೆಸಿದ್ದಾನೆ. ಈಗ, ಆನೆ ಬೆಳೆದಿದೆ, ಯೌವನ ಬಂದಿದೆ, ಗಂಡಸ್ಥಲಗಳಮೇಲೆ ಮದೋದಕ ಸುರಿಯುತ್ತಿದೆ. ಹಿಂದಿನಂತೆ ಆನೆಯ ಬಳಿಗೆ ಹೋಗಿ ಸಲಿಗೆಯಿಂದ ಬೆನ್ನುತಟ್ಟಿ, ಹುಲ್ಲು ಕೊಟ್ಟು, ಹಾಲೆರೆದು ಅದರೊಂದಿಗೆ ಆಟವಾಡಬೇಕೆಂಬ ಆಶೆ ಆಶ್ರಮವಾಸಿಗಿದೆ. ಆದರೆ ಹತ್ತಿರ ಹೋಗುವುದಕ್ಕೆ ಭಯ. ಒಂದು ಕಡೆ ವಾತ್ಸಲ್ಯದಿಂದ ಹುಟ್ಟಿದ ಉತ್ಕಂಠತೆ. ಇನ್ನೊಂದು ಕಡೆ ಆನೆಯ ಬಲ ಮತ್ತು ಹಿರಿಮೆಯಿಂದ ಉಂಟಾದ ಭಯ. ಹೀಗಾಗಿ ಆತನು ದೂರದಲ್ಲಿಯೇ ನಿಂತು, ಬಾರಿಬಾರಿಗೂ ಆ ಗಂಭೀರವಾದ ಮತ್ತಗಜವನ್ನು ಔತ್ಕಂಠ್ಯ ಮತ್ತು ಭಯಗಳಿಂದ ನೋಡುತ್ತಾನೆ.

ಜಿಂಕೆ :

**ಸ್ಥಲೀನಾಂ ದಗ್ಧಾನಾಮುಪರಿ ಮೃಗತೃಷ್ಣಾಮನುಸರಂ**
**ಸ್ತೃಷಾರ್ತಸ್ಸಾರಂಗೋ ವಿರಮತಿ ನ ಖಿನ್ನೋಪಿ ಮನಸಿ ॥**
**ಅಜಾನಾನಸ್ತತ್ವಂ ನ ಸ ಮೃಗಯತೇನ್ಯತ್ರಸರಸೀ-**
**ಮಭೂಮೌ ಪ್ರತ್ಯಾಶಾ ನ ಚ ಫಲತಿ ವಿಘ್ನಂ ಚ ಕುರುತೇ ॥**

(ಸು. ವ)

ಒಂದು ಜಿಂಕೆ ಕಷ್ಟಪಟ್ಟು ದಣಿದು ಮರಳುಗಾಡಿನಲ್ಲಿ ನೀರನ್ನು ಹುಡುಕಿಕೊಂಡು ಓಡುತ್ತಿದೆ.. ಆದರ ಕಣ್ಣಮುಂದೆ ಕಾಣುವುದು ನೀರಲ್ಲ, ಬಿಸಿಲುಗುದುರೆ. ಜಿಂಕೆಗೆ ಅದು ಗೊತ್ತಿಲ್ಲ. ಎಷ್ಟು ಓಡಿದರೂ ಅದಕ್ಕೆ ನೀರು ದೊರೆಯದು. ಓಡಿ ದಣಿದು ಖಿನ್ನವಾಗಿದೆ. ಆದರೂ ತತ್ವವನ್ನು ಅರಿಯದೆ ಪುನಃ ನೀರಿಗಾಗಿ ಇನ್ನೊಂದು ಕೊಳವನ್ನು ಹುಡುಕಿಕೊಂಡು ಹೋಗದೆ ಅದೇ ಮಾರ್ಗದಲ್ಲಿ ಓಡುತ್ತಿದೆ. ಯೋಗ್ಯವಲ್ಲದ ಸ್ಥಳದಲ್ಲಿ ನೆಟ್ಟ ಆಶೆ ಫಲಕಾರಿಯಾಗದಿರುವುದು ಮಾತ್ರವಲ್ಲದೆ ಅನೇಕ ಬಾರಿ ತೊಂದರೆಯನ್ನುಂಟುಮಾಡುವುದು.

ಚಾತಕ :

ಮೋಡಗಳಲ್ಲೂ ಎಲ್ಲವೂ ಮಳೆಗರೆಯುವುದಿಲ್ಲ. ನಾವು ಕಾಣುವ ಪ್ರತಿಯೊಬ್ಬ ಧನಿಕನೂ ದಾಸಿಯಲ್ಲ. ನಾವು ನೋಡುವ ಪ್ರತಿಯೊಬ್ಬ ಶಕ್ತನೂ ಉದಾರಿಯಲ್ಲ. ಈ ಕೆಳಗಿನ ಪದ್ಯ ಮೇಘಗಳ ವಿಷಯದಲ್ಲಿ ಚಾತಕವನ್ನು ಉದ್ದೇಶಿಸಿ ಹೇಳಿದೆ.

**ರೇ ರೇ ಚಾತಕ ಸಾವಧಾನಮನಸಾ ಮಿತ್ರ ಕ್ಷಣಂ ಶ್ರೂಯತಾ-**
**ಮಂಭೋದಾ ಬಹವೋ ವಸಂತಿ ಗಗನೇ ಸರ್ವೇಪಿ ನೇತಾದೃಶಾಃ ।**

**ಕೇಚಿದ್ವೃಷ್ಟಿಭಿರಾರ್ದ್ರಯಂತಿ ಧರಣೀಂ ಗರ್ಜಂತಿ ಕೇಚಿದ್ವೃಥಾ ಯಂ ಯಂ ಪಶ್ಯಸಿ ತಸ್ಯ ತಸ್ಯ ಪುರತೋ ಮಾ ಬ್ರೂಹಿ ದೀನಂ ವಚಃ ॥** (ಸ. ಕ.)

ಎಲೈ ಚಾತಕ ! ಒಂದು ಕ್ಷಣ ನನ್ನ ಮಾತನ್ನು ಆಲಿಸಿ ಕೇಳು. ಆಕಾಶದಲ್ಲಿ ನೂರಾರು ಮೋಡಗಳೇನೋ ಇವೆ. ಆದರೆ ಅವೆಲ್ಲವೂ ಒಂದೇ ತೆರನಲ್ಲ. ಕೆಲವು ಮಳೆ ಸುರಿಸಿ ಭೂಮಿಯನ್ನು ತಣ್ಣಗೆ ಮಾಡುತ್ತವೆ. ಮಿಕ್ಕವುಗಳು ಬರಿಯ ಗರ್ಜನೆಯನ್ನು ಮಾತ್ರ ಮಾಡುತ್ತವೆ. ಆದುದರಿಂದ ಕಂಡ ಕಂಡ ಮೋಡಗಳ ಮುಂದೆಲ್ಲಾ ನಿಂತು ದೀನವಾಕ್ಯಗಳನ್ನುಸಿರ ಬೇಡ.

ಚಾತಕಪಕ್ಷಿ ಆಕಾಶದಿಂದ ನೇರವಾಗಿ ಬಂದ ನೀರನ್ನು ಬಿಟ್ಟು ಬೇರೆ ನೀರನ್ನು ಕುಡಿಯುವುದಿಲ್ಲ. ಅದು ಚಾತಕದ ವ್ರತ. ನೈಚ್ಯಾನುಸಂಧಾನ ಮಾಡದೆ ಜೀವನ ಸಾಗಿಸುವ ಚಾತಕವನ್ನು ಕುರಿತು ಹೀಗೆ ವರ್ಣಿಸಿದ್ದಾನೆ.

**ಏಕ ಏವ ಖಗೋ ಮಾನೀ ಸುಖಂ ಜೀವತಿ ಚಾತಕಃ ।**
**ಅರ್ಥಿತ್ವಂ ಯಾತಿ ಶಕ್ರಸ್ಯ ನ ನೀಚಮುಪಸರ್ಪತಿ ॥** (ಸ. ಕ.)

ಹಕ್ಕಿಗಳಲ್ಲೆಲ್ಲಾ ಚಾತಕವೊಂದೇ ಸುಖವಾಗಿ ಜೀವಿಸ ತಕ್ಕ ಪ್ರಾಣಿ. ತನ್ನ ಜೀವನಕ್ಕಾಗಿ ಇಂದ್ರನನ್ನು ಅದು ಯಾಚಿ ಸುವುದೇ ಹೊರತು ನೀಚನನ್ನು ಅನುಸರಿಸದು.

ಚಕ್ರವಾಕ :

ಚಕ್ರವಾಕಪಕ್ಷಿಗೆ ಯಾವಾಗಲೂ ವಿರಹ ದುಃಖವು ಬಾಧಿ ಸುತ್ತಿರುತ್ತದೆ. ಈ ಅಗಲುವಿಕೆಯ ಭಯವು ಅದರ ಜೀವನ ವನ್ನೇ ಆವರಿಸಿ ಬಿಟ್ಟಿದೆ. ಇದು ಹಗಲನ್ನು ರಾತ್ರಿಯೆಂದು ಭ್ರಮಿಸಿ ಹೆದರುವ ಚಕ್ರವಾಕಪಕ್ಷಿಯ ವರ್ಣನೆ:

**ಭುಕ್ತ್ವಾ ಭೀತೋ ನ ಭುಂಕ್ತೇ ಕುಟಿಲವಿಸಲತಾಕೋಟಿ**
**ಮಿಂದೋರ್ವಿತರ್ಕಾ-**
**ತ್ತಾರಾಕಾರಾಸ್ತೃಷಾರ್ತೋ ನ ಪಿಬತಿ ಪಯಸಾಂ ವಿಪ್ರುಷಃ**
**ಪತ್ರಸಂಸ್ಥಾಃ ॥**
**ಛಾಯಾಮಂಭೋರುಹಾಣಾಮಲಿಕುಲಶಬಲಾಂ ವೇತ್ತಿ**
**ಸಂಧ್ಯಾಮಸಂಧ್ಯಾಂ**
**ಕಾಂತಾವಿಚ್ಛೇದಭೀರುರ್ದಿನಮಪಿ ರಜನೀಂ ಮನ್ಯತೇ**
**ಚಕ್ರವಾಕಃ ॥**
**ರಜಕಸರಸ್ವತೀ (ಸ. ಕ.)**

ಕಮಲಪತ್ರಗಳು ಚಕ್ರವಾಕಕ್ಕೆ ಆಹಾರ. ಹಸಿವಾದರೂ, ಕಮಲಗಳ ತುದಿಯನ್ನು ಚಂದ್ರನೆಂದು ಭ್ರಮಿಸಿ ಆಹಾರವನ್ನು ತೆಗೆದುಕೊಳ್ಳದು. ದಣಿವಾದರೂ, ತಾವರೆಯೆಲೆಗಳ ಮೇಲೆ ನಿಂತಿದ್ದ ಹನಿಗಳು ನಕ್ಷತ್ರಗಳೆಂಬ ಭ್ರಾಂತಿಯಿಂದ ನೀರು ಕುಡಿಯದು. ಕಮಲಗಳ ಮೇಲೆ ಹಾರಾಡುವ ಕಪ್ಪುದುಂಬಿಗಳ ನೆರಳಿಂದ ಹಗಲನ್ನೂ ರಾತ್ರಿಯೆಂದು ಭಾವಿಸುತ್ತದೆ. ಹೀಗೆ ಚಕ್ರವಾಕವು ತನ್ನ ಪ್ರಿಯಾವಿಚ್ಛೇದನದ ಹೆದರಿಕೆಯಿಂದ ಹಗಲನ್ನೂ ರಾತ್ರಿಯೆಂದು ತಿಳಿಯುತ್ತದೆ.

**ಹೆಂಗಸು—**

**ಸ್ತ್ರೀತಿಶ್ರುತೇ ಗತಂ ಧೈರ್ಯಂ ಸುರೂಪೇತಿ ಕಿಮುಚ್ಯತೇ ।**
**ಕಷ್ಟಂ ಸಹೃದಯಾ ಸಾ ಚೇತ್ಸ್ಪೃಹೇತ್ಯತಿದುಸ್ಸಹಂ ॥**
**ವೈದ್ಯಚಕ್ರವರ್ತಿ (ಸೂ. ಮು.)**

ಹೆಂಗಸಿನ ಚೆಲುವಿಗೆ ಸೋಲದವರಿಲ್ಲ. ಹೆಂಗಸು ಎನ್ನುತ್ತಲೆ ಮನಸ್ಸಿನ ಬಿಗಿ ತಪ್ಪುತ್ತದೆ. ಇನ್ನು ಅವಳು ಸುಂದರಿಯೆಂದರೆ ಹೇಳಬೇಕೆ? ಅದರಲ್ಲೂ ಆಕೆ ಸಹೃದಯಳಾದರೆ ಕಷ್ಟ. ಆಕೆಯೇ ಬಯಸಿದರಂತೂ ಸಹಿಸುವುದು ಅಸಾಧ್ಯ.

**ಸಾ ದೃಷ್ಟ್ವಾ ಯೈರ್ನವಾ ದೃಷ್ಟ್ವಾ ಮುಷಿತಾಃ ಸಮಮೇವ ತೇ ।**
**ಹೃದಯಂ ಹೃತಮೇಕೇಷಾಂ ಅನ್ಯೇಷಾಂ ಚಕ್ಷುಷೋಃ ಫಲಂ ॥**
ಪ್ರಭಾಕರದೇವ (ಶಾ. ಪ.)

ಅವಳನ್ನು ನೋಡಿದವರೂ ನೋಡದವರೂ ಇಬ್ಬರೂ ಒಂದೇ ರೀತಿ ಮೋಸ ಹೋದರು. ಒಬ್ಬರ (ನೋಡಿದವರ) ಹೃದಯವು ಲೂಟಿಯಾಯಿತು. ಉಳಿದವರ (ನೋಡದವರ) ಕಣ್ಣು ಇದ್ದರೂ ನಿಷ್ಫಲವಾಯಿತು.

ಹೆಂಗಸರ ನೋಟದ ಮಹಿಮೆ :

**ದೃಶಾ ದಗ್ಧಂ ಮನಸಿಜಂ ಜೀವಯನ್ತಿ ದೃಶೈವ ಯಾಃ ।**
**ವಿರೂಪಾಕ್ಷಸ್ಯ ಜಯಿನೀಸ್ತಾಃ ಸ್ತುವೇ ವಾಮಲೋಚನಾಃ ॥**
(ಸು. ವ.)

ಈಶ್ವರನ ಕಣ್ಣಿನಿಂದ ಉರಿದುಹೋದ ಮನ್ಮಥನನ್ನು ಇವರ ಕಣ್ಣು ಬದುಕಿಸಿವೆ. ವಿರೂಪಾಕ್ಷನನ್ನೇ ಗೆದ್ದ ಈ ವಾಮಲೋಚನೆಯರನ್ನು ಸ್ತುತಿಸುತ್ತೇನೆ.

## ಪ್ರಣಯ, ಅನುರಾಗ—

ಪ್ರಣಯಜೀವನದ ಕಷ್ಟವನ್ನು ತನ್ನ ಪ್ರಿಯನ ಮುಂದೆ ಒಬ್ಬಾಕೆ ಹೀಗೆ ಹೇಳಿಕೊಳ್ಳುತ್ತಾಳೆ.

**ಅದೃಷ್ಟೇ ದರ್ಶನೋತ್ಕಂಠಾ ದೃಷ್ಟೇ ವಿಚ್ಛೇದಭೀರುತಾ ।**
**ನಾದೃಷ್ಟೇನ ನ ದೃಷ್ಟೇನ ಭವತಾ ಲಭ್ಯತೇ ಸುಖಂ ॥**
(ಸು. ವ.)

ನೀನು ಕಾಣದಿರುವಾಗ ಕಾಣಬೇಕೆಂಬ ಹಂಬಲು ; ಕಂಡಾಗ ಎಲ್ಲಿ ನನ್ನನ್ನು ಅಗಲುವೆಯೋ ಎಂಬ ಅಂಜಿಕೆ; ಹೀಗಾಗಿ ನಿನ್ನನ್ನು ಕಂಡಾಗಲೂ ಕಾಣದಿರುವಾಗಲೂ ನನಗೆ ಸುಖವಿಲ್ಲದೆ ಹೋಯಿತು.

ಮೋಹದ ಮಾಯೆಯನ್ನು ಕುರಿತ ಮಾತಿದು—

**ಯದೇವ ರೋಚತೇ ಮಹ್ಯಂ ತದೇವ ಕುರುತೇ ಪ್ರಿಯಾ ।**
**ಇತಿ ವೇತ್ತಿ ನ ಜಾನಾತಿ ತತ್ಪ್ರಿಯಂ ಯತ್ಕರೋತಿ ಸಾ ॥**

(ಸು. ರ. ಭಾ.)

"ನನಗೆ ಯಾವುದು ಬೇಕೋ ಅದನ್ನೇ ನನ್ನ ಪ್ರಿಯೆ ಮಾಡುತ್ತಾಳೆ." ಹೀಗೆ ಅವನು ತಿಳಿದುಕೊಂಡಿದ್ದಾನೆ. ಆದರೆ ಅವಳು ಏನೇನು ಮಾಡುತ್ತಾಳೋ ಅದೆಲ್ಲವೂ ತನಗೆ ರುಚಿಸುತ್ತದೆ ಎಂಬುದನ್ನು ಅವನು ಅರಿಯ.

ಒಂದು ಕಡೆಯಿಂದ ಇನ್ನೊಂದು ಕಡೆಗೆ ಪ್ರಯಾಣಮಾಡುವಾಗ, ಮಾರ್ಗಾಯಾಸವನ್ನು ನೀಗಿಕೊಳ್ಳಲು ಪ್ರಯಾಣಿಕರು ಸತ್ರಗಳಲ್ಲಿ, ಅರವಟ್ಟಿಗೆಗಳಲ್ಲಿ ಕೊಂಚಕಾಲ ತಂಗುವುದು ವಾಡಿಕೆ. ಇಂತಹ ಅರವಟ್ಟಿಗೆಯೊಂದರಲ್ಲಿ ನಡೆದ ಸನ್ನಿವೇಶವೊಂದನ್ನು ಕವಿಯು ಬಹಳ ಸೊಗಸಾಗಿ ಚಿತ್ರಿಸಿದ್ದಾನೆ. ಮಾರ್ಗಸ್ಥನೊಬ್ಬನು ಅರವಟ್ಟಿಗೆಯಲ್ಲಿದ್ದ ಚೆಲುವೆಯೊಬ್ಬಳನ್ನು ಕಂಡು ಅವಳ ಸೌಂದರ್ಯಕ್ಕೆ ಮನಸೋತಿದ್ದಾನೆ. ಅವಳಿಗೂ ಅವನಲ್ಲಿ ಅನುರಾಗ ಮೂಡಿದೆ. ತಮ್ಮ ಪ್ರಣಯವನ್ನು ಬೆಳೆಸಲು, ಪ್ರಕಟಗೊಳಿಸಲು ಅವಕಾಶಗಳಿಲ್ಲ. ಈ ಸ್ಥಿತಿಯಲ್ಲಿ ಅವರು ಅನುಸರಿಸಿದ ಮಾರ್ಗವಿದು :

**ಯಥೋರ್ಧ್ವಾಕ್ಷಃ ಪಿಬತ್ಯಂಬು ಪಥಿಕೋ ವಿರಲಾಂಗುಲಿಃ ।**
**ತಥಾ ಪ್ರಪಾಪಾಲಿಕಾಪಿ ಧಾರಾಂ ವಿತನುತೇ ತನೂಂ ॥**

ಧನದದೇವ (ಸು. ವ.)

ಮಾರ್ಗಸ್ಥನಿಗೆ ಬಾಯಾರಿಕೆ ತೀರಿದೆ. ಇನ್ನೂ ಆಕೆಯ ಮುಖವನ್ನು ನೋಡಬೇಕೆಂಬ ಆಸೆ. ಮೇಲೆ ನೆಟ್ಟ ಕಣ್ಣೊಡನೆ

ಬೆರಳುಗಳನ್ನಗಲಿಸಿದ ಬೊಗಸೆಯಲ್ಲಿ ಪಥಿಕನೀರು ಕುಡಿಯು
ತ್ತಿದ್ದಾನೆ. ಇದನ್ನು ನೋಡಿ ಅರವಟ್ಟಿಗೆಯ ಹುಡುಗಿ ತೆಳ್ಳಗೆ
ಬಿಡುತ್ತಿದ್ದ ನೀರಿನ ಧಾರೆಯನ್ನು ಇನ್ನೂ ತೆಳ್ಳಗೆ ಮಾಡುತ್ತಾಳೆ.

ದುಷ್ಯಂತನು ಶಕುಂತಳೆಯನ್ನು ಮೊದಲನೆಬಾರಿ ನೋಡಿದ
ಮೇಲೆ ಅನಿವಾರ್ಯವಾಗಿ ಅಗಲಿ ಹೋಗುವಾಗ ಹೇಳಿದ ಮಾತು :

**ಗಚ್ಛತಿ ಪುರಶ್ಶರೀರಂ ಧಾವತಿ ಪಶ್ಚಾದಸಂಸ್ಥಿತಂ ಚೇತಃ ।**
**ಚೀನಾಂಶುಕಮಿವ ಕೇತೋಃ ಪ್ರತಿವಾತಂ ನೀಯಮಾನಸ್ಯ ॥**

**ಕಾಳಿದಾಸ** (ಕ. ವ. ಸು.)

ದೇಹ ಮುಂದೆ ಸಾಗುತ್ತಿದೆ. ಆದರೆ ತವಕಗೊಂಡ ಮನಸ್ಸು
ಎದುರುಗಾಳಿಗೆ ಸಿಕ್ಕಿದ ರೇಷ್ಮೆಬಟ್ಟೆಯ ಬಾವುಟದಂತೆ ಹಿಂದಕ್ಕೆ
ಓಡುತ್ತಿದೆ.

ಒಂದು ವ್ಯಕ್ತಿಯಲ್ಲಿ ನೆಟ್ಟ ಅನುರಾಗವನ್ನು ಇದಕ್ಕಿಂತ
ಸೊಗಸಾಗಿ ಗಂಭೀರವಾಗಿ ಚಿತ್ರಿಸಲು ಸಾಧ್ಯವೇ ?

ಇನ್ನು ಪ್ರಸ್ಥಾನಕಾಲದಲ್ಲಿನ ಪ್ರಿಯರ ವಾಕ್ಯಗಳನ್ನು
ನೋಡೋಣ—

ಗಂಡನು ದೂರದೇಶಕ್ಕೆ ಪ್ರಯಾಣಮಾಡುವ ಸಂಭವ
ವೊದಗಿದೆ. ತನ್ನ ಪ್ರಯಾಣದ ಸಂಗತಿಯನ್ನು ಹೆಂಡತಿಗೆ ತಿಳಿಸಿ,
ಹೋಗಿ ಬರಲೆ ? ಎಂದು ಕೇಳುತ್ತಾನೆ. ಅವನನ್ನು ಬಿಟ್ಟಿರಲು
ಆಕೆಗೆ ಮನಸ್ಸಿಲ್ಲ. ಆದರೆ ಪ್ರಯಾಣ ಹೊರಡುವಾಗ ಏನು
ಹೇಳಲೂ ಆಕೆಗೆ ತೋರದು. ಕೊನೆಗೆ ಹೀಗನ್ನುತ್ತಾಳೆ.

**ಮಾ ಯಾಹೀತ್ಯಪಮಂಗಲಂ ವ್ರಜ ಕಿಲ ಸ್ನೇಹೇನ ಶೂನ್ಯಂ ವಚ-**
**ಸ್ತಿಷ್ಠೇತಿ ಪ್ರಭುತಾ ಯಥಾರುಚಿ ಕುರುಷ್ವೇಷಾಪ್ಯುದಾಸೀನತಾ ॥**

**ನೋ ಜೀವಾಮಿ ವಿನಾ ತ್ವಯೇತಿ ವಚನಂ ಸಂಭಾವ್ಯತೇ ವಾ ನ ವಾ**
**ತನ್ಮಾಂ ಶಿಕ್ಷಯ ನಾಥ ಯತ್ಸಮುಚಿತಂ ವಕ್ತುಂ ತ್ವಯಿ ಪ್ರಸ್ಥಿತೇ ॥ (ಸು. ವ.)**

"ಹೋಗಬೇಡಿ" ಎಂಬುದು ಅಮಂಗಲ; "ಹೋಗಿ" ಎನ್ನುವುದು ಸ್ನೇಹಶೂನ್ಯವಾದ ಮಾತು; "ನಿಲ್ಲಿ, ಇಲ್ಲೇ ಇರಿ" ಎನ್ನುವುದು ಆಜ್ಞೆ; "ನಿಮ್ಮ ಇಷ್ಟಬಂದಂತೆ ಮಾಡಿ" ಎಂಬುದು ಉದಾಸೀನವಾಕ್ಯ; "ನಿಮ್ಮನ್ನು ಬಿಟ್ಟು ನಾನು ಬದುಕಿರಲಾರೆ" ಎಂಬ ಮಾತನ್ನು ನಂಬುವಿರೋ ಇಲ್ಲವೋ ನಾನರಿಯೆ. ಆದುದರಿಂದ ಒಡೆಯ, ನೀವು ಹೊರಟಿರುವಾಗ ಏನು ಹೇಳುವುದು ಉಚಿತವೋ ಅಂತಹ ಮಾತನ್ನು ನೀವೇ ನನಗೆ ಕಲಿಸಿ.

ಇದೇ ರೀತಿಯ ಇನ್ನೊಬ್ಬಾಕೆಯ ಮಾತು:

**ಗಂತವ್ಯಂ ಯದಿ ನಾಮ ನಿಶ್ಚಿತಮಹೋ ಗಂತಾಸಿ ಕೇಯಂ ತ್ವರಾ**
**ದ್ವಿತ್ರಾಣ್ಯೇವ ಪದಾನಿ ತಿಷ್ಠತು ಭವಾನ್ ಪಶ್ಯಾಮಿ ಯಾವನ್ಮುಖಂ ॥**
**ಸಂಸಾರೇ ಘಟಿಕಾ ಪ್ರಣಾಲವಿಗಲದ್ಧಾರಾಸಮೇ ಜೀವಿತೇ**
**ಕೋ ಜಾನಾತಿ ಪುನಸ್ತ್ವಯಾ ಸಹ ಮಮ ಸ್ಯಾದ್ವಾ ನ ವಾ ಸಂಗಮಃ ॥ (ಸು. ವ.)**

ಹೊರಡಲೇ ಬೇಕಾಗಿದ್ದರೆ ಹೊರಡುವಿರಿ, ಇಷ್ಟು ತ್ವರೆ ಯೇಕೆ? ಎರಡು ಹೆಜ್ಜೆ ತಿರುಗಿ ನಿಲ್ಲಿ, ಇನ್ನೊಮ್ಮೆ ನಿಮ್ಮ ಮುಖವನ್ನು ನೋಡುತ್ತೇನೆ. ಈ ಸಂಸಾರವೆಂಬುದು ಘಟಿಕಾ*

---

* ಘಟಿಕಾ ಎಂದರೆ ಪೂರ್ವಿಕರು ಕಾಲವನ್ನು ತಿಳಿಯಲು ಉಪಯೋಗಿಸುತ್ತಿದ್ದ ಯಂತ್ರ.

ರಂಧ್ರದಿಂದ ಸುರಿವ ಜಲಧಾರೆಯಂತೆ. ಪುನಃ ನಮ್ಮಿಬ್ಬರ ಸಮಾಗಮವಾಗುವುದೋ ಇಲ್ಲವೋ ಬಲ್ಲವರಾರು ?

ಬದುಕು ಸ್ವಲ್ಪವುಂದೆ ಸಾಗಿ ಗಂಡಹೆಂಡಿರ ಪ್ರೇಮ ಗಾಢವಾಗಿ, ಅದು ಅವರಿಬ್ಬರ ಹೃದಯಗಳನ್ನೂ ಬಂಧಿಸಬಲ್ಲ ಮಗುವಿನಲ್ಲಿ ಫಲಗೊಂಡಿದೆ. ಗಂಡ ದೂರದೇಶಕ್ಕೆ ಪ್ರಯಾಣ ಹೋಗಬೇಕಾಯಿತು. ಹೆಂಡತಿಗೆ ಸಮಾಧಾನ ಹೇಳಿ ಬೇಕಾದಷ್ಟು ಭರವಸೆಯ ಮಾತುಗಳನ್ನು ಹೇಳಿದ. ಆಕೆಯ ಮನಸ್ಸಿನಲ್ಲಿ ಅಗಲಿಕೆಯ ದುಃಖ ತಲೆದೋರಿದೆ. ಇನ್ನೇನು ಅವನು ಹೊರಡಬೇಕು :

**ಯಾಸ್ಯಾಮೀತಿ ಗಿರಃ ಶ್ರುತಾ ಹ್ಯವಧಿರಪ್ಯಾರೋಪಿತಶ್ಚೇತಸಿ**
**ಗೇಹೇ ಯತ್ನವತೀ ಭವಿಷ್ಯಸಿ ಸದೇತ್ಯೇತತ್ಸಮಾಕರ್ಣಿತಂ ॥**
**ಬಾಲೇ ಮಾಶುಚ ಇತ್ಯುದೀರಿತವತಃ ಪತ್ಯುರ್ನಿರೀಕ್ಷ್ಯಾನನಂ**
**ನಿಶ್ವಸ್ಯ ಸ್ತನಪಾಯಿನಿ ಸ್ವತನಯೇ ದೃಷ್ಟಿಶ್ಚಿರಂ ಪಾತಿತಾ ॥**

ಧೀರನಾಗ (ಸು. ವ.)

“ ನಾನು ಹೊರಡುತ್ತೇನೆ ” ಎಂಬ ಮಾತನ್ನು ಕೇಳಿದಳು. ಹಿಂದಿರುಗಿಬರುವ ಅವಧಿಯ ದಿನವನ್ನೂ ಮನಸ್ಸಿನಲ್ಲಿ ನೆಟ್ಟಳು. “ ಮನೆಯಕಡೆ ಜಾಗರೂಕಳಾಗಿರು ” ಎಂಬ ಮಾತನ್ನು ಕೇಳಿದಳು. “ಬಾಲೆ, ಅಳಬೇಡ ” ಎಂದು ಗಂಡನೆನ್ನಲು ಅವನ ಮುಖವನ್ನು ಒಮ್ಮೆ ನೋಡಿ, ನಿಟ್ಟುಸಿರುಬಿಟ್ಟು, ಹಾಲು ಕುಡಿಯುತ್ತಿದ್ದ ತನ್ನ ಕಂದನ ಮೇಲೆ ಆ ನೋಟವನ್ನು ತಂಗಿಸಿದಳು.

ಇನ್ನು ವಿರಹಿ ವಿರಹಿಣಿಯರ ಮಾತು.

## ವಿರಹಿಣಿಯ ಅವಸ್ಥೆ—

ವರ್ಷಾಕಾಲ ಬಂದಿತೆಂದರೆ, ದೇಶಾಂತರ ಹೊರಟಿರುವವರೆಲ್ಲರೂ ತಮ್ಮ ಮನೆಗಳನ್ನು ಸೇರುವರು. ಸ್ತ್ರೀಯರು ಹಿಂದಿರುಗಿ

ಬರುವುದು ಸ್ವಲ್ಪ ತಡವಾಯಿತೆಂದರೆ ಪ್ರೋಷಿತಭರ್ತೃಕೆಯರಿಗೆ ವ್ಯಥೆ. ಆಕಾಶದಲ್ಲಿ ಮೋಡಕಂಡರೆ ತಮ್ಮ ಪ್ರಿಯರು ಹಿಂದಿರುಗಿ ತಮ್ಮನ್ನು ಸೇರುವರೆಂಬ ಆಶೆ ಅವರಲ್ಲಿ ಮೂಡುತ್ತದೆ. ಇದನ್ನು ಕಾಳಿದಾಸನು "ಪ್ರೇಕ್ಷಿಷ್ಯನ್ತೇ ಪಥಿಕವನಿತಾಃ ಪ್ರತ್ಯಯಾದಾಶ್ವಸನ್ತ್ಯಃ" ಎಂಬ ವಾಕ್ಯದಲ್ಲಿ ಮೇಘದೂತದಲ್ಲಿ ಚೆನ್ನಾಗಿ ಹೇಳಿದ್ದಾನೆ. ಮಳೆಗಾಲಬಂದಿದೆ ದೇಶಾಂತರ ಪ್ರಯಾಣ ಮಾಡಿದ್ದವರೆಲ್ಲರೂ ಹಿಂತಿರುಗಿ ಬರುತಿದ್ದಾರೆ. ಒಬ್ಬಾಕೆಯ ಗಂಡನಿನ್ನೂ ಮನೆಗೆ ಬಂದು ಸೇರಿಲ್ಲ. ಆಕೆ ಮಾರ್ಗಸ್ಥನೊಬ್ಬನನ್ನು ಕಂಡು ತನ್ನ ಪ್ರಿಯನ ವಿಷಯವನ್ನು ಕುರಿತು ಕೇಳುತ್ತಾಳೆ.

**ಭ್ರಾತಃ ಪಾಂಥ ಪಥಿ ತ್ವಯಾ ನು ಪಥಿಕಃ ಕಶ್ಚಿತ್ಸಮಾಸಾದಿತೋ**
**ಬಾಲೇ ನೈಕಶತಾನಿ ಕೀದೃಶ ಇತಿ ಪ್ರಖ್ಯಾಪ್ಯತಾಂ ವಲ್ಲಭಃ ।**
**ಯಂ ದೃಷ್ಟ್ವಾ ಪ್ರಮದಾಜನಸ್ಯ ಭವತಃ ಸ್ಫಾರೇ ಮುದಾ ಲೋಚನೇ**
**ಸ ಜ್ಞೇಯೋ ದಯಿತೋ ಮಮೇತಿ ಪಥಿಕಾಯಾವೇದ್ಯ ಮೋಹಂ ಗತಾ ॥ (ಸೂ. ಮು.)**

"ಅಣ್ಣಾ, ಮಾರ್ಗಸ್ಥ! ನಿನಗೆ ದಾರಿಯಲ್ಲಿ ಯಾರಾದರೂ ಬೇರೊಬ್ಬ ಮಾರ್ಗಸ್ಥ ಕಂಡುಬಂದನೆ?"

"ನೂರಾರುಮಂದಿ! ನಿನ್ನ ಗಂಡ ಹೇಗಿದ್ದಾನೆಂದು ಬಣ್ಣಿಸಿದರೆ ಹೇಳಬಹುದು."

"ಯಾರನ್ನು ನೋಡಿದರೆ ಹೆಂಗಸರ ಕಣ್ಣುಗಳು ಸಂತೋಷದಿಂದ ಅರಳುವುವೋ ಅವನೇ ನನ್ನ ವಲ್ಲಭ"—ಹೀಗೆಂದು ಪಾಂಥನಿಗೆ ಹೇಳಿ ಆಕೆ ಮೂರ್ಛೆಹೋದಳು.

**ಅಖಿ ನಗಣಯತಿ ರೇಖಾ ನಿರ್ಭರಬಾಷ್ಪಾಂಬುಧೌತ ಗಂಡತಲಾ ।**
**ಅವಧಿದಿವಸಾವಸಾನಂ ಮಾಭೂದಿತಿ ಶಂಕಿತಾ ಬಾಲಾ ॥ (ಸು. ವ.)**

ಪ್ರಿಯನು ಇಷ್ಟುದಿನ ಕಳೆದಮೇಲೆ ಬರುವೆನೆಂದು ಹೇಳಿದ್ದಾನೆ. ಅವನು ಹೊರಟುಹೋದ ಬಳಿಕ ದಿನಕ್ಕೆ ಒಂದು ಗೆರೆಯಂತೆ, ಗುರುತು ಹಾಕಿದ್ದಾಳೆ. ಆದರೆ ಆ ಗೆರೆಗಳನ್ನು ಮಾತ್ರ ಎಣಿಸಲಾರಳು. ಕೆನ್ನೆಗಳಮೇಲೆ ಕಣ್ಣೀರು ಸುರಿಯುತ್ತಿದೆ. ಗಡುವಿನ ದಿನ ಮುಗಿಯಿತೋ ಏನೋ ಎಂದು ಆಕೆಯ ಮನಸ್ಸು ಅಳುಕುತ್ತಿದೆ.

ಇದು ಇನ್ನೊಬ್ಬ ವಿರಹಿಣಿಯ ಮಾತು: ಗಂಡ ದೇಶಾಂತರಕ್ಕೆ ಹೋಗಿದ್ದು, ಆಕೆಯ ಮನಸ್ಸು, ಚೇತನವೆಲ್ಲವೂ ಅವನನ್ನೇ ಹಿಂಬಾಲಿಸಿವೆ. ಉಳಿದಿರುವುದು ಉಸಿರೊಂದು; ಆಶಾಭಂಗದಿಂದ ಆ ಉಸಿರೂ ಕೊನೆಗಾಣುವಕಾಲ ಬಂದಿದೆ:

**ಪ್ರಿಯೇ ಪ್ರಯಾತೇ ಹೃದಯಂ ಪ್ರಯಾತಂ**
**ನಿಶ್ಶೇಷ್ಟಯಾ ಚೇತನಯಾ ಸಹೈವ ॥**
**ನಿರ್ಲಜ್ಜ ಹೇ ಜೀವಿತ ನ ಶ್ರುತಂ ಕಿಂ**
**ಮಹಾಜನೋಯೇನಗತಃ ಸ ಪಂಥಾಃ ॥**

**ಧರ್ಮಕೀರ್ತಿ (ಕ. ವ. ಸ.)**

ಪ್ರಿಯನು ಹೊರಡಲು ಅವನೊಂದಿಗೆ ಹೃದಯವೂ ಹೊರಟಿತು. ಅದರ ಜತೆಯಲ್ಲಿಯೇ ಚೇಷ್ಟಾರಹಿತವಾದ ಚೇತಸ್ಸೂ ಪ್ರಯಾಣಮಾಡಿತು. ಲಜ್ಜಾರಹಿತವಾದ ಜೀವಿತವೆ! ಹಿರಿಯರು ನಡೆದ ಹಾದಿಯೇ ಸರಿಯಾದ ಮಾರ್ಗವೆಂಬುದನ್ನು ನೀನು ಕೇಳಿಲ್ಲವೆ?

ವಿರಹಿಯ ದುಃಖವಿದಕ್ಕಿಂತ ಕಡಮೆಯಾದುದಲ್ಲ:

**ಹಾರೋ ನಾರೋಪಿತಃ ಕಂಠೇ ಮಯಾ ವಿಶ್ಲೇಷಭೀರುಣಾ ।**
**ಇದಾನೀಮಂತರೇ ಜಾತಾಃ ಸರಿತ್ಸಾಗರಭೂಧರಾಃ ॥**

**ವಾಲ್ಮೀಕಿ (ಶಾ. ಪ.)**

ನಮ್ಮಿಬ್ಬರಿಗೂ ಅಂತರವೊದಗುವುದೆಂಬ ಭಯದಿಂದ ಹಾರವನ್ನು ಕೂಡ ಧರಿಸಲಿಲ್ಲ. ಆದರೆ ಈಗ ನಮ್ಮ ನಡುವೆ ನದಿಗಳೂ, ಸಮುದ್ರಗಳೂ, ಬೆಟ್ಟಗಳೂ ಅಡ್ಡ ನಿಂತಿವೆ.

ಪ್ರೇಮಹುಟ್ಟಿ ಅನಂತರ ಅದನ್ನು ಕಳೆದುಕೊಳ್ಳುವುದಕ್ಕಿಂತ ಅದು ಹುಟ್ಟದಿರುವುದೇ ಲೇಸು :

**ಅಕೃತಪ್ರೇಮ್ಣೈವ ವರಂ ನ ಪುನಸ್ಸಂಜಾತವಿಘ್ನಿತಪ್ರೇಮಾ ।**
**ಉದ್ಧೃತನಯನೋ ಹಿ ಯಥಾ ತಾಮ್ಯತ್ಯೇವಂ ನ ಜಾತ್ಯಂಧಃ॥**

ರವಿಗುಪ್ತ (ಸು. ವ.)

ಪ್ರೇಮ ಹುಟ್ಟಿ ಬೆಳೆದು ಆ ಮೇಲೆ ವಿಚ್ಛೇದವಾಗುವುದಕ್ಕಿಂತ ಹುಟ್ಟದಿರುವುದೇ ಲೇಸು. ಕಣ್ಣು ಕಿತ್ತುಹೋದವನು ಸಂಕಟಪಡುವಷ್ಟು ಹುಟ್ಟುಕುರುಡನು ಪಡುವನೇ ?

ಪ್ರೀತಿಸುತ್ತಿದ್ದವನು ಅನ್ಯಮನಸ್ಕನಾದರೆ ಆ ಸಂಕಟ ಇನ್ನೂ ಘೋರವಾದುದು :

**ಇದಂ ಕೃಷ್ಣಂ ಕೃಷ್ಣಂ ಪ್ರಿಯತಮ ನನು ಶ್ವೇತಮಥಕಿಂ**
**ಗಮಿಷ್ಯಾಮೋ ಯಾಮಃ ಭವತುಗಮನೇನಾಥಭವತು ।**
**ಪುರಾ ಯೇನೈವಂಮೇ ಚಿರಮನುಸೃತಾ ಚಿತ್ತಪದವೀ**
**ಸ ಏವಾನ್ಯೋ ಜಾತಃ ಸಖಿ ಪರಿಚಿತಾಃ ಕಸ್ಯ ಪುರುಷಾಃ ॥**

ಅಮರುಕ (ಸೂ. ಮು.)

**'ಇದು ಕಪ್ಪು' ಹೌದು ಕಪ್ಪು. ಪ್ರಿಯತಮ ಅದು ಬಿಳುಪಲ್ಲವೆ? 'ಅಲ್ಲದೆ ಏನು.'? 'ನಾವು ಹೊರಡೋಣವೇ'? 'ಇಗೋ ಹೊರಡುವ'. 'ನಡೆದುದು ಸಾಕು'. 'ಹಾಗೆಯೇ ಆಗಲಿ'. ಹೀಗೆ ನನ್ನ ಮನಸ್ಸಿನ ಮಾರ್ಗವನ್ನೇ ಅನುಸರಿಸುತ್ತಿದ್ದವನು ಈಗ ಅನ್ಯನಾಗಿದ್ದಾನೆ. ಸಖಿ! ಪುರುಷರನ್ನು ಬಲ್ಲವರು ಯಾರು ?**

ಪ್ರೇಮ ಸಫಲವಾಗಬೇಕಾದರೆ ಎರಡು ಆತ್ಮಗಳು ಸೇರ ಬೇಕು. ಇದೇ ಉತ್ತಮೋತ್ತಮತರದ ಪ್ರೇಮ.

ಶಕುಂತಲೆಯಲ್ಲಿ ದುಷ್ಯಂತನು ಅನುರಕ್ತನಾದನು. ಆ ಅನುರಾಗದ ಭರದಿಂದ ತಾನು ಊರಿಗೆ ಹೋಗುವುದನ್ನು ಕೂಡ ಮರೆತು ಮೂರು ಹೊತ್ತೂ ಶಕುಂತಲೆಯ ವಿಷಯವನ್ನೇ ಆಲೋಚಿಸುತ್ತಿದ್ದಾನೆ. ಆಶ್ರಮವಾಸಿಯಾದ ಶಕುಂತಲೆಯು ರಾಜರ್ಷಿಯ ಕುವರಿಯೆಂದೂ ತನ್ನ ಪರಿಗ್ರಹಕ್ಕೆ ಯೋಗ್ಯಳಾದವಳೆಂದೂ ದುಷ್ಯಂತನಿಗೆ ತಿಳಿದಿದೆ. ಆಕೆ ಒಲಿಯಬಹುದೆಂಬುದೂ ಆತನಿಗೆ ಗೊತ್ತು. ಹೀಗೆ ಮನಸ್ಸುಗಳ ಕೂಟವೊಂದರಿಂದಲೇ ಆಹ್ಲಾದವುಂಟಾಗಿದೆ. ದುಷ್ಯಂತ ಶಕುಂತಲೆಯರು ಒಟ್ಟುಗೂಡದಿದ್ದರೂ, ಶಕುಂತಲೆ ತನ್ನನ್ನು ಪ್ರೀತಿಸುವಳೆಂಬುದೊಂದೇ ಸಂತೋಷವನ್ನುಂಟುಮಾಡುತ್ತದೆ.

**ಕಾಮಂ ಪ್ರಿಯಾ ನ ಸುಲಭಾ ಮನಸ್ತು ತದ್ಭಾವದರ್ಶನಾಶ್ವಾಸಿ ।**
**ಅಕೃತಾರ್ಥೇಽಪಿ ಮನಸಿಜೇ ರತಿಮುಭಯಪ್ರಾರ್ಥನಾ ಕುರುತೇ॥**

**ಕಾಳಿದಾಸ (ಸು. ರ. ಭಾ.)**

ಪ್ರಿಯಳು ಸುಲಭವಾಗಿ ದೊರೆಯಳೆಂಬುದು ನಿಶ್ಚಯ. ಆದರೆ ಮನಸ್ಸು ಅವಳ ಭಾವವನ್ನು ತಿಳಿದು ನೋಡಿ ಭರವಸೆ ಕೊಡುತ್ತಿದೆ. ಮನ್ಮಥನು ಕೃತಾರ್ಥನಾಗದಿದ್ದರೂ ಒಬ್ಬರಲ್ಲೊಬ್ಬರಿಗೆ ಇರುವ ಬಯಕೆಯೇ ಆಹ್ಲಾದಜನಕವಾಗಿದೆ.

ಆದರ್ಶದಾಂಪತ್ಯವೆಂದರೆ ಇದು :

**ಅದ್ವೈತಂ ಸುಖದುಃಖಯೋರನುಗತಂ ಸರ್ವಾಸ್ವವಸ್ಥಾಸು ಯ-ದ್ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ ರಸಃ ॥**

**ಕಾಲೇನಾವರಣಾತ್ಯಯಾತ್ಪರಿಣತೇ ಯತ್ಪ್ರೇಮಸಾರೇ ಸ್ಥಿತಂ**
**ಭದ್ರಂ ತಸ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ಪ್ರಾರ್ಥ್ಯತೇ॥**

**ಭವಭೂತಿ (ಸೂ. ಮು.)**

ಸುಖದುಃಖಗಳೆರಡರಲ್ಲೂ ಒಂದೇಸಮನಾಗಿ, ಎಲ್ಲ ಅವಸ್ಥೆ ಗಳಲ್ಲಿಯೂ ಮನಸ್ಸು ವಿಶ್ರಾಂತಿಯ ಅನುಭವವನ್ನು ಪಡೆದು, ಮುಪ್ಪಿನಲ್ಲೂ ಸವಿಕುಂದದೆ, ಎಲ್ಲಿ ಕಾಲಬೆಳೆದಂತೆಲ್ಲಾ ಮೇಲೆ ಮುಚ್ಚಿದ್ದ ಮುಸುಕು ತೆಗೆದು ಪ್ರೇಮಪರಿಣತವಾಗಿ ನಿಲ್ಲುವುದೋ ಅದೇ ಉತ್ಕೃಷ್ಟವಾದ ದಾಂಪತ್ಯ. ಇಂತಹುದನ್ನು ಬಯಸದ ವರಾರು?

**ಮಾನಿನೀ—**

ಪ್ರಣಯದಲ್ಲಿ ಕಲಹಗಳೂ, ವಿವಾದಗಳೂ ಇಲ್ಲದೆ ಇಲ್ಲ. ಇಂತಹ ಚಿತ್ರಗಳಲ್ಲಿ ಸಾಮಾನ್ಯವಾಗಿ ಪ್ರಿಯನೇ ಅಪರಾಧಿ. ಅವನು ತನ್ನಲ್ಲಿ ಎಷ್ಟು ಅನುರಾಗ ತೋರಿಸಬೇಕೋ ಅಷ್ಟು ತೋರಿಸುತ್ತಿಲ್ಲವೆಂದು ಪ್ರಿಯೆಯ ಭಾವನೆ. ಅವನ ತಪ್ಪುಗಳನ್ನು ಅವಳು ಸಹಿಸಳು. ಅಪರಾಧಮಾಡಿದುದಕ್ಕಾಗಿ ಶಿಕ್ಷಿಸದೆ ಬಿಡಳು. ಅಂತಹವಳಿಗೆ ಮಾನಿನಿಯೆಂದು ಹೆಸರು. ಆಕೆ ಕೊಡುವ ಶಿಕ್ಷೆಯನ್ನು ಅವನು ಅನುಭವಿಸುವುದು ಬಹು ಕಷ್ಟವಾಗು ವುದು. ಆಕೆ ವಿಧಿಸುವ ಶಿಕ್ಷೆಯ ಮಾರ್ಗವೇ ವಿಲಕ್ಷಣವಾದುದು:

**ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ**
**ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ ಸರ್ವೇಽಪರಾಧಾ ಮಯಿ ॥**
**ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ**
**ನನ್ವೇತನ್ಮಮ ಕಾ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ॥**

**ಕುಮಾರಭಟ್ಟ (ಕ. ವ. ಸ.)**

ಕೋಪಗೊಂಡು ಆಕೆ ಯಾವ ವಿಧವಾದ ಶಿಕ್ಷೆಯನ್ನೂ ಮಾಡಲಿಲ್ಲ; ಕಠಿಣವಾದ ವಾಕ್ಯಗಳನ್ನೂ ಆಡಲಿಲ್ಲ. ಬಹುಶಃ ಮೌನವನ್ನು ಧರಿಸಿದ್ದಾಳೆ. ನೆಟ್ಟ ನೋಟದಿಂದ ಪ್ರಿಯನನ್ನು ನೋಡಿ ಕಣ್ಣೀರುಹಾಕಿರಬಹುದು. ಇಬ್ಬರಿಗೂ ಹೀಗೆ ಸಂಭಾಷಣೆ ನಡೆಯುತ್ತದೆ:

"ಬಾಲೆ!" "ಒಡೆಯ!" "ಕೋಪವನ್ನು ಬಿಡು." "ಕೋಪಗೊಂಡು ನಾನೇನು ಮಾಡಿದೆ?" "ನನ್ನ ಮೇಲೆ ಖೇದಗೊಂಡಿದ್ದಿ." "ನೀನು ಯಾವ ಅಪರಾಧವನ್ನೂ ಮಾಡಿಲ್ಲ. ಇಲ್ಲ, ಅಪರಾಧವೆಲ್ಲವೂ ನನ್ನದೇ." "ಹಾಗಾದರೆ ಯಾತಕ್ಕೆ ಕಣ್ಣೀರು ಹಾಕುತ್ತಿದ್ದಿ?" "ಯಾರ ಮುಂದೆ?" "ನನ್ನ ಮುಂದೆ ಅಲ್ಲವೆ?" "ನಾನು ಯಾರು ನಿಮಗೆ?" "ದಯಿತೆ" "ಅಯ್ಯೋ ಹಾಗಾಗಿಲ್ಲವಲ್ಲಾ ಎಂದು ಅಳುತ್ತೇನೆ."

ಇನ್ನೊಬ್ಬಳು ತನ್ನ ಪ್ರಿಯನ ವಿಷಯದಲ್ಲಿ ತನಗಿದ್ದ ಕೋಪವನ್ನು ಬಹು ಜಾಣತನದಿಂದ ವ್ಯಕ್ತಪಡಿಸುತ್ತಾಳೆ.

**ಏಕತ್ರಾಸನಸಂಸ್ಥಿತಿಃ ಪರಿಹೃತಾ ಪ್ರತ್ಯುದ್ಗಮಾದ್ದೂರತ-**
**ಸ್ತಾಂಬೂಲಾಹರಣಚ್ಛಲೇನ ರಭಸಾಶ್ಲೇಷಕ್ರಮೋ ವಿಘ್ನಿತಃ ।**
**ಸಂಲಾಪೋಽಪಿ ನ ಮಿಶ್ರಿತಃ ಪರಿಜನಂ ವ್ಯಾಪಾರಯಂತ್ಯಾಂತಿಕೇ**
**ಭರ್ತುಃ ಪ್ರತ್ಯುಪಚಾರತಶ್ಚತುರಯಾ ಕೋಪಃ ಕೃತಾರ್ಥೀಕೃತಃ॥**

ಅಮರುಕ (ಸ. ಕ.)

ಅವನು ಇನ್ನೂ ದೂರದಲ್ಲಿ ಬರುತ್ತಿರುವಾಗಲೇ ಸ್ವಾಗತವನ್ನು ಬಯಸುವುದಕ್ಕಾಗಿ ಎದ್ದುಬಂದು ತನ್ನ ಜೊತೆಯಲ್ಲಿ ಅವನು ಕೂಡುವುದನ್ನು ನಿವಾರಿಸಿದಳು. ತಾನೇ ಸ್ವತಃ ಅವನಿಗೆ ತಾಂಬೂಲವನ್ನು ತಂದುಕೊಡುವ ನೆವದಲ್ಲಿ ಆಲಿಂಗನ

ವನ್ನೂ ತಪ್ಪಿಸಿದಳು. ಎಲ್ಲ ಕಾಲವೂ, ಅದು ಮಾಡು ಇದು ಮಾಡು ಎಂದು ಪರಿಜನರಿಗೆ ಅಪ್ಪಣೆಮಾಡುತ್ತಾ ಅವನೊಂದಿಗೆ ಒಂದು ನಿಮಿಷ ಕೂಡ ಮಾತನಾಡಲಿಲ್ಲ. ಹೀಗೆ ತನ್ನ ಗಂಡನನ್ನು ಉಪಚರಿಸುವ ನೆವದಲ್ಲಿ ಅವನ ಮೇಲಿದ್ದ ಕೋಪವನ್ನು ಸಾರ್ಥಕಪಡಿಸಿಕೊಂಡಳು.

**ಅಭಿಸಾರಿಕೆ**—

ಇಂತಹ ಗೀತೆಗಳಲ್ಲಿ ಬಹುಭಾಗ ಸಂಭಾಷಣ ರೂಪದಲ್ಲಿದೆ. ಪ್ರಿಯಾನ್ವೇಷಣಕ್ಕಾಗಿ ಹೊರಟಿರುವ ಅಭಿಸಾರಿಕೆ ತನ್ನನ್ನು ಮಾರ್ಗ ಮಧ್ಯದಲ್ಲಿ ಪ್ರಶ್ನಿಸಿದವರಿಗೆ ಉತ್ತರಕೊಡುವ ರೀತಿಯಿದು :

**ಕ್ವ ಪ್ರಸ್ಥಿತಾಸಿ ಕರಭೋರು ಘನೇ ನಿಶೀಥೇ**
**ಪ್ರಾಣಾಧಿಪೋ ವಸತಿ ಯತ್ರಮನಃ ಪ್ರಿಯೋ ಮೇ ॥**
**ಏಕಾಕಿನೀ ವದ ಕಥಂ ನ ಬಿಭೇಷಿ ಬಾಲೇ**
**ನನ್ವಸ್ತಿ ಪುಂಖಿತಶರೋ ಮದನಃ ಸಹಾಯಃ ॥**

ಗೋವಿಂದಸ್ವಾಮಿ (ಶಾ. ಪ.)

ಸುಂದರಿ, ಈ ಕಗ್ಗತ್ತಲ ರಾತ್ರಿಯಲ್ಲಿ ಎಲ್ಲಿಗೆ ಹೊರಟಿರುವೆ ? ನನ್ನ ಜೀವಿತದ ಒಡೆಯ, ನನ್ನ ನಲ್ಲನಿರುವ ಬಳಿಗೆ. ಒಬ್ಬಳೇ ಹೊರಟಿರುವೆ, ಭಯವಾಗದೆ? ಭಯವೇಕೆ? ಸನ್ನದ್ಧಶರನಾದ ಮನ್ಮಥನು ನನಗೆ ಸಹಾಯವಿಲ್ಲವೆ !

ಇದಿಷ್ಟೂ ಪ್ರೇಮಕ್ಕೆ ಸಂಬಂಧಿಸಿದ ಪದ್ಯಗಳು.

ಇನ್ನು ಮುಂದೆ ಅನ್ಯೋಕ್ತಿ ಪ್ರಕರಣಕ್ಕೆ ಸೇರಿದ ಕೆಲವು ಪದ್ಯಗಳನ್ನು ಕೊಡಲಾಗುವುದು. ಇದು ವಿಡಂಬನಕಾವ್ಯದ ಒಂದು ಭೇದ. ಜನಸಾಮಾನ್ಯದ ತಪ್ಪುಗಳನ್ನು ತೋರಿಸುವುದೇ

ವಿಡಂಬನಕಾರನ ಕೆಲಸ. ಅವನಿಗೆ ತನ್ನ ಕಾಲದ ವ್ಯಕ್ತಿಗಳು, ಸನ್ನಿವೇಶಗಳು, ವಸ್ತುಗಳು—ಇವುಗಳಲ್ಲಿ ಯಾರ ಚರ್ಯೆಗಳು ವಿಲಕ್ಷಣವಾಗಿ, ಹೇಯವಾಗಿ ಕಂಡುಬರುತ್ತವೆಯೋ, ಯಾರ ವಿಷಯದಲ್ಲಿ ಅವರ ಅಪರಾಧಗಳಿಂದ ಒಂದು ಮುರುಕ ತೋರುತ್ತದೆಯೋ ಅಂತಹವರನ್ನು ವರ್ಣಿಸುತ್ತಾನೆ. ಇವು ಆಯಾ ಕಾಲದ ಸನ್ನಿವೇಶಗಳನ್ನೂ ವ್ಯಕ್ತಿಗಳನ್ನೂ ಕುರಿತು ಹೇಳಿದ ಮಾತುಗಳಾದರೂ, ಮಾನವನಲ್ಲಿ ಅಡಗಿರುವ ದುರಾಸೆ, ಕೃತಘ್ನತೆ, ಗರ್ವ, ಡಂಭಾಚಾರ ಇಂತಹ ಕುಂದುಗಳನ್ನು ಮುಖ್ಯವಾಗಿ ಚಿತ್ರಿಸಿರುವುದರಿಂದ ಎಲ್ಲ ಕಾಲಗಳಿಗೂ ಜೀವನದ ಎಲ್ಲ ಸನ್ನಿವೇಶಗಳಿಗೂ ಅನ್ವಯಿಸುವಂತೆ ಇರುತ್ತವೆ. ಶ್ರೇಷ್ಠನಾದ ವಿಡಂಬನಕಾರನು ಮಾನವ ಜೀವನದಲ್ಲಿ ತುಚ್ಛವಾದ ಗುಣಗಳುಳ್ಳವರನ್ನು ಚಿತ್ರಿಸಿ ಸಮಾಜದಲ್ಲಿ ಬಹು ದೊಡ್ಡವರೆಂದು ಹೆಸರು ಪಡೆದಿರುವವರ ಲೋಪದೋಷಗಳನ್ನೂ ಪ್ರಕಟಪಡಿಸುತ್ತಾನೆ. ಸಾಮಾನ್ಯಪ್ರಾಣಿಗಳನ್ನೂ ಅಚೇತನವಸ್ತುಗಳನ್ನೂ ತನ್ನ ವರ್ಣನೆಗೆ ವಸ್ತುವಾಗಿ ಆರಿಸಿಕೊಂಡು ಅವುಗಳ ಹೆಸರಿನಲ್ಲಿ ಮಾನವನ ನಡೆ, ನುಡಿ, ವ್ಯವಹಾರಗಳಲ್ಲಿರುವ ಲೋಪದೋಷಗಳನ್ನು ತೋರಿಸಿ ಅಂತಹ ವಸ್ತುಗಳನ್ನೂ ವ್ಯಕ್ತಿಗಳನ್ನೂ ಹಾಸ್ಯಕ್ಕೆ ಗುರಿಮಾಡುತ್ತಾನೆ. ಜನಸಾಮಾನ್ಯದಲ್ಲಿ ಕಂಡುಬರುವ ಲೋಪದೋಷಗಳನ್ನು ಹೊರಗೆಡಹುವುದಕ್ಕಾಗಿ ಮೃಗಪಕ್ಷಿ ಸಸ್ಯಗಳನ್ನುದ್ದೇಶಿಸಿ, ಅವುಗಳಲ್ಲಿನ ಕುಂದನ್ನು ಚಿತ್ರಿಸಿ ಹೇಳಿರುವ ಅಪದೇಶವಾಕ್ಯಗಳು ಈ ಅನ್ಯೋಕ್ತಿಗಳು.

**ಆನೆ**

ಲೋಕದಲ್ಲಿ ಯಾರಿಂದ ಸಹಾಯಪಡೆದಿರುತ್ತಾರೆಯೋ ಅಂತಹವರ ಉಪಕಾರವನ್ನು ಮರೆತು ಅವರನ್ನು ಹಾಳು

ಮಾಡಲು ಇಚ್ಛಿಸುವ ಕೃತಘ್ನರೆಷ್ಟುಮಂದಿ ಇಲ್ಲ? ಇಂತಹ ಮಾನವನ ಸ್ವಭಾವವನ್ನು ಆನೆಯೊಂದರಲ್ಲಿ ಕಂಡು ಅದನ್ನು ವರ್ಣಿಸಿರುವ ಪದ್ಯ ಇದು:

**ಪೀತಂ ಯತ್ರ ಹಿಮಂ ಪಯಃ ಕವಲಿತಾ ಯಸ್ಮಿನ್ ಮೃಣಾ**
**ಲಾಂಕುರಾ-**
**ಸ್ನಾತ್ ಪಾರ್ಶ್ವೇನ ನಿಮಜ್ಯ ಯತ್ರ ಸರಸೋ ಮಧ್ಯೇ ವಿಮುಕ್ತಃ**
**ಶ್ರಮಃ ॥**
**ಧಿಕ್ತಸ್ಯೈವ ಜಲಾನಿ ಪಂಕಿಲಯತಃ ಪಾಥೋಜಿನೀಂ ಮಥ್ನತಃ**
**ಕೂಲಾನ್ಯುತ್ಖನತಃ ಕರೀಂದ್ರ ಭವತೋ ಲಜ್ಜಾಪಿ ನೋ**
**ಜಾಯತೇ** ॥ (ಶಾ. ಪ.)

ಇಲ್ಲಿ ತಣ್ಣಗಿರುವ ನೀರನ್ನು ಕುಡಿದೆ, ತಾವರೆಯ ದಂಟುಗಳನ್ನು ತಿಂದೆ; ಬಿಸಿಲಿನಿಂದ ತಾಪಗೊಂಡಾಗ ಇದೇ ಸರಸ್ಸಿನ ಮಧ್ಯೆ ಮುಳುಗಿ ನಿನ್ನ ಆಯಾಸವನ್ನು ಪರಿಹರಿಸಿಕೊಂಡೆ. ಆದರೆ ಎಲೈ ಕರೀಂದ್ರನೆ! ನೀನು ಈಗ ಅದೇ ಸರಸ್ಸಿನ ನೀರನ್ನು ಕೆಸರುಮಾಡಿ, ತಾವರೆ ದಂಟುಗಳನ್ನು ಕಿತ್ತೆಸೆದು, ಸರೋವರದ ದಡಗಳನ್ನುರುಳಿಸುತ್ತಿರುವೆಯಲ್ಲ, ನಿನಗೆ ಲಜ್ಜೆಯಾದರೂ ಬಾರದೆ?

ತನ್ನ ಪರಾಕ್ರಮದ ಎಲ್ಲೆಯನ್ನು ಅರಿಯದ ಮತ್ತಗಜವನ್ನು ಸಂಬೋಧಿಸಿ ಹೇಳಿದ ಎಚ್ಚರಿಕೆಯ ಮಾತು:

**ಕೇಲಿಂ ಕುರುಷ್ವ ಪರಿಭುಂಕ್ಷ್ವ ಸರೋರುಹಾಣಿ**
**ಗಾಹಸ್ವ ಶೈಲತಟನಿರ್ಝರಿಣೀ ಪಯಾಂಸಿ** ॥
**ಭಾವಾನುರಕ್ತಕರಿಣೀ ಕರಲಾಲಿತಾಂಗ**
**ಮಾತಂಗ ಮುಂಚ ಮೃಗರಾಜರಣಾಭಿಲಾಷಂ** ॥

ಆನಂದವರ್ಧನ (ಸು. ವ.)

ಪ್ರೇಮಯುಕ್ತವಾದ ಕರಿಣಿಯ ಕರಸ್ಪರ್ಶಕ್ಕೆ ಒಳಗಾದ ಮತ್ತಗಜವೆ! ನಿನಗೆ ಇಷ್ಟಬಂದಂತೆ ಆಟವಾಡು, ಸರೋವರದ ತಾವರೆಗಳನ್ನೆಲ್ಲಾ ತಿನ್ನು, ಗಿರಿನದಿಗಳ ನೀರಿನಲ್ಲಿ ಮುಳುಗಾಡು, ಆದರೆ ಮೃಗರಾಜನೊಂದಿಗೆ ಯುದ್ಧಮಾಡಬೇಕೆಂಬ ಆಸೆಯನ್ನು ಮಾತ್ರ ಬಿಟ್ಟುಬಿಡು.

ಮುಂದಿನ ಪದ್ಯವೂ ಆನೆಯನ್ನು ಸಂಬೋಧಿಸಿ ಹೇಳಿದುದೇ. ಆದರೆ ಸನ್ನಿವೇಶ ಬೇರೆ. ಇದು ಏನೂ ಅರಿಯದೆ ಬಂಧನಕ್ಕೊಳಗಾದ ಆನೆಯ ಕತೆ. ಕವಿ ಇಲ್ಲಿ ಆನೆಯೇ ತನ್ನ ಕತೆಯನ್ನು ಹೇಳುವಂತೆ ಮಾಡಿ, ಪರಿತಾಪವನ್ನು ಹೆಚ್ಚಿಸಿದ್ದಾನೆ.

**ತ್ಯಕ್ತೋ ವಿಂಧ್ಯಗಿರಿಃ ಪಿತಾ ಭಗವತೀ ಮಾತೇವ ರೇವಾನದೀ**
**ತ್ಯಕ್ತಾಃ ಸ್ನೇಹನಿಬಂಧ ಬಂಧುರಧಿಯ ಸ್ತುಲ್ಯೋದಯಾ ದಂತಿನಃ ।**
**ತ್ವಲ್ಲೋಭಾನ್ನನುಹಸ್ತಿನಿ ಸ್ವಯಮಿದಂ ಬಂಧಾಯ ದತ್ತಂ ವಪು-**
**ಸ್ತ್ವಂ ದೂರೇ ಧ್ರಿಯಸೇ ಲುಠನ್ತಿ ಚ ಶಿರಃಪೀಠೇ ಕಠೋರಾಃ ಕುಶಾಃ ॥ (ಸೂ. ಮು.)**

ಇಲ್ಲಿ ಸಲಗವೊಂದು ಹೆಣ್ಣಾನೆಯನ್ನು ಸಂಬೋಧಿಸಿ ಹೇಳುತ್ತದೆ:

ನನಗೆ ತಂದೆಯಂತಿದ್ದ ವಿಂಧ್ಯಪರ್ವತವನ್ನು ನಾನು ಬಿಟ್ಟೆ; ತಾಯಿಯಂತಿದ್ದ ರೇವಾ ನದಿಯನ್ನು ತೊರೆದೆ; ಜನ್ಮಪ್ರಭೃತಿ ನನ್ನಲ್ಲಿ ಪ್ರೇಮತೋರಿ ಗೆಳೆಯರಾಗಿದ್ದ ಇತರ ಆನೆಗಳನ್ನೂ ತ್ಯಜಿಸಿದೆ. ಎಲೈ ಕರಿಣಿ! ನಿನ್ನ ಮೇಲಿನ ಆಸೆಯಿಂದ ನಾನಾ ಬಂಧನಕ್ಕೆ ಒಳಗಾದೆ. ಈಗ ನಿನ್ನನ್ನು ದೂರದಲ್ಲಿಟ್ಟಿದ್ದಾರೆ. ನನ್ನ ಕುತ್ತಿಗೆಯ ಮೇಲೆ ಕಠೋರವಾದ ಅಂಕುಶಗಳು ಗೀರುತ್ತಿವೆ.

**ಹಂಸ**

**ಆಕಾರಃ ಕಮನೀಯತಾಕುಲಗೃಹಂ ಲೀಲಾಲಸಾ ಸಾ ಗತಿ-**
**ಸ್ಸಂಪರ್ಕಃ ಕಮಲಾಕರೈಃ ಕಲತಯಾ ಲೋಕೋತ್ತರಂ**
**ಕೂಜಿತಂ ।**
**ಯಸ್ಯೇಯಂ ಗುಣಸಂಪದಸ್ತಿ ಮಹತೀ ತಸ್ಯಾಪಿ ಭವ್ಯಸ್ಯ ತೇ**
**ಸಂರಬ್ಧತ್ವಮಸದ್ಗುಮದ್ಗು ಕಲಿಹೇ ನಾಹಂ ಸಹೇ ಹಂಸ ಹೇ ॥**

(ಸೂ. ಮು.)

ಆಕಾರವಾದರೋ ಲಾವಣ್ಯಕ್ಕೆ ತೌರುಮನೆ; ನಡಗೆ ಲೀಲಾಯುತವಾದುದು; ವಾಸ ಸರೋವರದಲ್ಲಿ; ಕೂಗು ಮಾಧುರ್ಯದಿಂದ ಲೋಕೋತ್ತರವಾದುದು; ಇಷ್ಟು ಗುಣಗಳಿದ್ದರೂ ಎಲೈ ಹಂಸ, ನಿನ್ನ ಕಲಹವ್ಯಾಪಾರವನ್ನು ಮಾತ್ರ ಸಹಿಸಲಾರೆ.

**ದುಂಬಿ**

ತನ್ನ ಆಸೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ನೀಚನಾದವನು ಎಂತಹ ತಿರಸ್ಕಾರವನ್ನಾದರೂ ಸಹಿಸುತ್ತಾನೆ:

**ಅನುಸರತಿ ಕರಿಕಪೋಲಂ ಭ್ರಮರಃ ಶ್ರವಣೇನ ತಾಡ್ಯ**
**ಮಾನೋಽಪಿ ।**
**ಗಣಯತಿ ನ ತಿರಸ್ಕಾರಂ ದಾನಾಂಧವಿಲೋಚನೋ ನೀಚಃ ॥**

(ಶಾ. ಪ.)

ದುಂಬಿ ಮದೋದಕದಿಂದ ಕೂಡಿದ ಆನೆಯ ಕಪೋಲಗಳ ಮೇಲೆ ಕೂಡಲು ಆಶೆಯಿಂದ ಹೋಗುತ್ತದೆ. ಆದರೆ ಆನೆ ಅದನ್ನು ಸಹಿಸದೆ ಕಿವಿಬೀಸಿ ಹೊಡೆಯುತ್ತದೆ. ಆದರೂ ದುಂಬಿ ಆ ಮದೋದಕದ ಆಸೆಯಿಂದ, ತಿರಸ್ಕಾರವನ್ನು ಲಕ್ಷಿಸದೆ ಪುನಃ ಪುನಃ ಅದನ್ನೇ ಅನುಸರಿಸುತ್ತ ಹೋಗುತ್ತದೆ.

## ಮೇಘ

ಮನುಷ್ಯನಿಗೆ ರೂಪು ಮುಖ್ಯವಲ್ಲ; ಗುಣ. ಪರರಿಗೆ ಉಪಕಾರಿಯಾಗಿದ್ದರೆ, ಆವನ ರೂಪು ಹೇಗಿದ್ದರೇನು?

**ಪ್ರಾವೃಷೇಣ್ಯಸ್ಯ ಮಾಲಿನ್ಯಂ ದೋಷಃ ಕೋಽಭೀಷ್ಟವರ್ಷಿಣಃ ।**
**ಶಾರದಾಭ್ರಸ್ಯ ಶುಭ್ರತ್ವಂ ವದ ಕುತ್ರೋಪಯುಜ್ಯತೇ ॥**

ಚಂದ್ರಕವಿ (ಶಾ. ಪ)

ಬೇಕಾದಷ್ಟು ಮಳೆಗರೆಯುವ ವರ್ಷಾಕಾಲದ ಮೋಡದ ಕಪ್ಪುಬಣ್ಣದಲ್ಲಿ ದೋಷವೇನು? ಶರತ್ಕಾಲದ ಮೇಘಗಳ ಶುಭ್ರವರ್ಣದಿಂದ ಉಪಯೋಗವಾದರೂ ಏನು?

## ಸಮುದ್ರ

ನೋಡುವುದಕ್ಕೆ ಹೆಮ್ಮೆಯಿಂದ ಕೂಡಿರಬಹುದು. ಇತರರಿಗೆ ಅವರಿಂದ ಉಪಕಾರವಿಲ್ಲ. ಇಂತಹವರ ಗರ್ವವನ್ನು ಹೀಯಾಳಿಸುವ ಪದ್ಯವಿದು :

**ಮಾ ಕುರು ಗುರುತಾಗರ್ವಂ ಲಘುರನ್ಯೋ ನಾಸ್ತಿ ಸಾಗರ ತ್ವತ್ತಃ ।**
**ಜಲಸಂಗ್ರಹಮನ್ಯಸ್ಮಾತ್ತ್ವಯಿ ಸತಿ ಕುರ್ವಂತಿ ಪೋತಸ್ಥಾಃ ॥**

ಪ್ರಹ್ಲಾದನ (ಸು. ರ. ಭಾ)

ಎಲೈ ಸಮುದ್ರ, ದೊಡ್ಡವನೆಂದು ಗರ್ವಿಸಬೇಡ. ನಿನಗಿಂತ ಚಿಕ್ಕವನು ಬೇರೊಬ್ಬನಿಲ್ಲ. ಏಕೆಂದರೆ, ನೀನು ವಾರಿಧಿಯೆನಿಸಿಕೊಂಡರೂ ನಿನ್ನಮೇಲೆ ಸಂಚರಿಸುವ ನಾವಿಕರು ಕುಡಿಯುವ ನೀರಿಗಾಗಿ ನೀನೇ ಇದ್ದಾಗ್ಲೂ ಇತರರನ್ನು ಆಶ್ರಯಿಸಬೇಕಾಗಿದೆ.

ಇದೇ ಅರ್ಥಕೊಡುವ ಇನ್ನೊಂದು ಪದ್ಯವಿದೆ :

**ಯದ್ವೀಚೀಭಿಃ ಸ್ಪೃಶಸಿ ಗಗನಂ ಯಚ್ಚ ಪಾತಾಲಮೂಲಂ**
**ರತ್ನೈರುದ್ದೀಪಯಸಿ ಪಯಸಾ ಯತ್ಪೃಥಿವ್ಯೇ ಧರಿತ್ರೀಂ ।**
**ಧಿಕ್ ಸರ್ವಂ ತತ್ತವ ಜಲನಿಧೇ ಯದ್ವಿಮುಚ್ಯಾಶ್ರುಧಾರಾಂ**
**ತೀರೇ ನೀರಗ್ರಹಣರಸಿಕೈರಧ್ವಗೈರುಜ್ಝಿತೋಽಸಿ ॥** (ಸೂ. ಮು.)

ನಿನ್ನ ಅಲೆಗಳು ಆಕಾಶವನ್ನು ಮುಟ್ಟುತ್ತವೆ. ನಿನಗೆ ಪಾತಾಲ ಮೂಲ. ನಿನ್ನಲ್ಲಿರುವ ರತ್ನಗಳಿಂದ ಬೆಳಗುವೆ. ಇಡೀ ಭೂಮಿಯನ್ನೇ ನೀನು ನೀರಿನಿಂದ ಆವರಿಸಿರುವೆ. ಆದರೇನು ? ನಿನ್ನ ದಡದಲ್ಲಿ ಮಾರ್ಗಸ್ಥರು ದಣಿದು ಕುಡಿಯಲು ನೀರಿಲ್ಲದೆ ಕಣ್ಣೀರು ಬಿಡುತ್ತಿದ್ದಾರೆ. ಅಂತಹವರಿಂದ ತ್ಯಕ್ತನಾಗಿದ್ದಿ.

ಗುಣಾವಗುಣಗಳನ್ನು ತಿಳಿಯದೆ, ಉಪಯೋಗವಿಲ್ಲದ ವಸ್ತುವನ್ನು ಗೌರವಿಸಿ, ನಿಜವಾಗಿಯೂ ಬೆಲೆ ಬಾಳುವ ವಸ್ತುವನ್ನು ಕಡೆಯಾಗಿ ಕಾಣುವರು ಬಹುಮಂದಿ :

**ಅಧಃಕರೋಷಿ ಯದ್ರತ್ನಂ ಮೂರ್ಧ್ನಾ ಧಾರಯಸೇ ತೃಣಂ ।**
**ದೋಷಸ್ತವೈವ ಜಲಧೇ ರತ್ನಂ ರತ್ನಂ ತೃಣಂ ತೃಣಂ ॥**

(ಸು. ರ. ಭಾ.)

ಎಲೈ ಸಮುದ್ರವೆ, ರತ್ನವನ್ನು ಕೆಳಗೆ ಹಾಕಿ ಹುಲ್ಲನ್ನು ತಲೆಯಮೇಲೆ ಧರಿಸುವೆ. ಇದು ನಿನ್ನ ದೋಷವನ್ನು ವ್ಯಕ್ತಪಡಿಸುತ್ತದೆ. ಎಂದಿಗೂ ರತ್ನ ರತ್ನವೇ ; ತೃಣ ತೃಣವೇ.

## ವೃಕ್ಷ—

ಗಿಡಗಳಲ್ಲಿ ಖದಿರವೃಕ್ಷದ ತುಂಬ ಗಂಟುಮುಳ್ಳು. ನೋಡುವುದಕ್ಕೆ ಇದಕ್ಕಿಂತ ವಿಕಾರದ ಮರವಿಲ್ಲ. ಇದನ್ನು ನೋಡಿ ಕವಿಯೊಬ್ಬನು ತೀಕ್ಷ್ಣವಾದ ವಾಕ್ಯವನ್ನು ಅಂದಿದ್ದಾನೆ :

**ಚಂದನೇ ವಿಷಧರಾ ಸಹಾಮಹೇ ವಸ್ತು ಸುಂದರಮಗುಪ್ತಿ**
**ಮತ್ಕೃತಃ ।**
**ರಕ್ಷಿತುಂ ವದ ಕಿಮಾತ್ಮಸೌಷ್ಠವಂ ಕಂಟಕಾಃ ಖದಿರಸಂಚಿತಾ**
**ಸ್ತ್ವಯಾ ॥ ಭಲ್ಲಟ (ಸೂ. ಮು.)**

ಸುಂದರವಾದ ವಸ್ತು ರಕ್ಷಣೆ ಇಲ್ಲದೆ ಹೇಗೆ ಇರಬಹುದು? ಆದರಿಂದ ಚಂದನ ವೃಕ್ಷದಲ್ಲಿ ಹಾವುಗಳಿರುವುದನ್ನು ನಾವು ಸಹಿಸುತ್ತೇವೆ. ಆದರೆ ಎಲೈ ಖದಿರ! ನಿನ್ನ ಯಾವ ಸೌಂದ ರ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ಈ ಮುಳ್ಳುಗಳನ್ನು ಶೇಖ ರಿಸಿದ್ದಿ?

ಈ ಮೇಲಿನ ಪದ್ಯಗಳಿಂದ ಸಂಸ್ಕೃತದಲ್ಲಿನ ಅನ್ಯಾಪದೇಶದ ಸ್ವಾರಸ್ಯವನ್ನು ಊಹಿಸಬಹುದು.

ಸಂಸ್ಕೃತದಲ್ಲಿ ಪ್ರಶ್ನೋತ್ತರ ರೂಪದಲ್ಲಿರುವ ಕೆಲವು ಸಂಭಾಷ ಣೆಯ ಪದ್ಯಗಳಿವೆ. ಸನ್ನಿವೇಶಕ್ಕೆ ತಕ್ಕಂತೆ ಸಂಭಾಷಣೆ ಇರುತ್ತವೆ. ಅಲ್ಲಿಯ ಪ್ರಶ್ನೆ, ಉತ್ತರ ಎರಡೂ ಸ್ವಾರಸ್ಯವಾಗಿರುತ್ತವೆ. ಒಂ ದೊಂದು ತರಹ ಪದಕ್ಕೂ ಎರಡೆರಡು ಅರ್ಥ ಬರುವಂತೆ ಮಾತು ಇರುತ್ತವೆ. ಅಲ್ಲಿ ಚಿತ್ರಿಸಿರುವ ವ್ಯಕ್ತಿಗಳಲ್ಲಿ ಒಬ್ಬರು ನಿರೀಕ್ಷಿಸುವ ಉತ್ತರವನ್ನು ಮರೆಮಾಚಲು, ಇನ್ನೊಬ್ಬರು ಆ ಪದದ ಇನ್ನೊಂದು ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಸಂದರ್ಭಕ್ಕೊದಗುವಂತೆ ಉತ್ತರ ಕೊಡುತ್ತಾರೆ. ಇವುಗಳಲ್ಲಿ ಕಂಡುಬರುವುದು ಬರಿಯ ಶಬ್ದ ವೈಚಿತ್ರ್ಯಮಾತ್ರವಲ್ಲ; ಅರ್ಥ ದಲ್ಲೂ ಸೊಗಸಿದೆ. ಇಂತಹ ಪದ್ಯಗಳಲ್ಲಿ ಕಂಡುಬರುವವರು ದೇವತೆಗಳಾದರೂ ವರ್ಣಿತವಾದ ವಿಷಯಗಳು ಮಾನವ ಸ್ವಭಾವಕ್ಕೆ ಸರಿಯಾದುವು. ಗಂಡ ಹೆಂಡತಿಯರ ಸಂಭಾಷಣೆ,

ಅವರ ಕೋಪ ಪ್ರದರ್ಶನ, ಅವರ ಹಾಸ್ಯದ ಮಾತುಗಳು ಮೊದಲಾದುವುಗಳೆಲ್ಲಾ ಇಲ್ಲಿ ಚಿತ್ರಿತವಾಗಿವೆ. ಹೀಗೆ ಆ ದೇವತೆಗಳ ಮಾನವ ಸಹಜವಾದ ಚರ್ಯೆಗಳನ್ನು ಚಿತ್ರಿಸುವಾಗ, ನಮಗೆ ಆ ದೇವತೆಗಳಲ್ಲಿರುವ ಭಕ್ತಿಗೌರವಗಳು ಕುಂದದ ರೀತಿಯಲ್ಲಿ ಕವಿಗಳು ವರ್ಣಿಸಿರುತ್ತಾರೆ.

ಶಿವ ಮತ್ತು ಗೌರಿಯರ ಈ ಸಂಭಾಷಣೆಯನ್ನು ನೋಡಿ:

**ಧನ್ಯಾ ಕೇಯಂ ಸ್ಥಿತಾ ತೇ ಶಿರಸಿ ಶಶಿಕಲಾ ಕಿಂನು ನಾಮೈತದಸ್ಯಾ**
**ನಾಮೈವಾಸ್ಯಾಸ್ತದೇತತ್ಪರಿಚಿತಮಪಿತೇ ವಿಸ್ಮೃತಂ ಕಸ್ಯ**
**ಹೇತೋಃ ।**
**ನಾರೀಂ ಪೃಚ್ಛಾಮಿ ನೇಂದುಂ ಕಥಯತು ವಿಜಯಾ ನ**
**ಪ್ರಮಾಣಂ ಯದೀಂದುಃ**
**ದೇವ್ಯಾನಿಹ್ನೋತುಮಿಚ್ಛೋರಿತಿ ಸುರಸರಿತಂ ಶಾಠ್ಯಮವ್ಯಾದ್ವಿ**
**ಭೋರ್ವಃ ॥** ವಿಶಾಖದತ್ತ. (ಸೂ. ಮು.)

ಗೌರಿ—ನಿನ್ನ ತಲೆಯ ಮೇಲಿರುವ ಆ ಧನ್ಯೆ ಯಾರು?

ಶಿವ—ಶಶಿಕಲೆ.

ಗೌರಿ—ಅದು ಆಕೆಯ ಹೆಸರೊ?

ಶಿವ—ಅದೇ ಆಕೆಯ ಹೆಸರು. ಪರಿಚಿತವಾಗಿದ್ದರೂ ಹೇಗೆ ಮರೆತುಹೋಯಿತು?

ಗೌರಿ—ನಾನು ಕೇಳುವುದು ಚಂದ್ರನನ್ನಲ್ಲ. ನಿನ್ನ ತಲೆಯಮೇಲಿರುವ ಹೆಂಗಸನ್ನು.

ಶಿವ—ಚಂದ್ರನನ್ನು ನಂಬದಿದ್ದರೆ ವಿಜಯೆಯೇ ಹೇಳಲಿ. (ವಿಜಯೆ ಗೌರಿಯ ಚೇಟಿ.)

ಹೀಗೆಂದು ತಲೆಯಮೇಲಿರುವ ದೇವಗಂಗೆಯನ್ನು ದೇವಿಗೆ

ಮರೆಮಾಚಲು ಪ್ರಯತ್ನಿಸುತ್ತಿರುವ ಈಶ್ವರನ ಛಲೋಕ್ತಿಯು ನಿಮ್ಮನ್ನು ಕಾಪಾಡಲಿ.

ಇನ್ನೊಂದರಲ್ಲಿ ಗೌರಿಯ ವಾಕ್ಕಿನ ನೈಪುಣ್ಯವಿದೆ.

**ಖೇದಸ್ತೇ ಕಥಮೀದೃಶಃ ಪ್ರಿಯತಮೇ ತ್ವನ್ನೇತ್ರವಹ್ನೇ**
**ರ್ವಿಭೋ**
**ಕಸ್ಮಾತ್ಕಂಪಿತಮೇತದಿಂದುವದನೇ ಭೋಗೀಂದ್ರ ಭೀತೇರ್ಭವ।**
**ರೋಮಾಂಚಃ ಕಥಮೇಷ ದೇವಿ ಭಗವನ್ ಗಂಗಾಂಭಸಾಂ**
**ಶೀಕರೈ-**
**ರಿತ್ಥಂ ಭರ್ತರಿ ಭಾವಗೋಪನಪರಾ ಗೌರೀ ಚಿರಂ ಪಾತು ವಃ ॥**

ಲಕ್ಷ್ಮೀಧರ (ಸ. ಕ.)

ಶಿವ—ಪ್ರಿಯೆ, ಏಕಿಷ್ಟು ಖೇದ ?
ಗೌರಿ—ನಿನ್ನ ಕಣ್ಣಿನ ಬೆಂಕಿಯಿಂದ.
ಶಿವ—ಎಲೈ ಇಂದುವದನೆ! ಏಕೆ ನಡುಗುತ್ತಿರುವೆ ?
ಗೌರಿ—ನಿನ್ನ ಮೇಲಿರುವ ಹಾವುಗಳ ಭಯದಿಂದ.
ಶಿವ—ಈ ರೋಮಾಂಚವೆಲ್ಲಿಯದು ?
ಗೌರಿ—ಗಂಗೆಯ ತುಂತುರುಗಳಿಂದ.

ಹೀಗೆ ತನ್ನ ಭಾವವನ್ನು ಮುಚ್ಚಿಟ್ಟು ಗಂಡನೊಂದಿಗೆ ಮಾತನಾಡುತ್ತಿರುವ ಗೌರಿಯು ನಮ್ಮನ್ನು ಕಾಪಾಡಲಿ.

ವಿಷ್ಣು ಮತ್ತು ಲಕ್ಷ್ಮಿ:

ಕೋಪಗೊಂಡಿರುವ ಲಕ್ಷ್ಮಿಯನ್ನು ಸಮಾಧಾನ ಪಡಿಸಲು ವಿಷ್ಣು ಪ್ರಯತ್ನಿಸುತ್ತಿದ್ದಾನೆ. ಬೆಡಗುಮಾತುಗಳಿಗೆ ಬೆರಗಾಗಿ ಲಕ್ಷ್ಮಿ ಮಾತಿನಲ್ಲಿ ಸೋಲುವವಳಲ್ಲ. ಒಂದು ಮಾತು ಹೇಳಿದರೆ ಎರಡರ್ಥಮಾಡಿ ಉತ್ತರ ಕೊಡಬಲ್ಲಳು. ವಿಷ್ಣು ಕೊನೆಗೆ

ಆಕೆಗೆ ತಲೆಬಾಗಿ ಶಾಂತಗೊಳಿಸಬೇಕಾಯಿತು.

**ದೇವಿ ತ್ವಂ ಕುಪಿತಾ ತ್ವಮೇವ ಕುಪಿತಾ ಕೋಽನ್ಯಃ ಪೃಥಿವ್ಯಾ ಗುರುಃ**
**ಮಾತಾ ತ್ವಂ ಜಗತಾಂ ತ್ವಮೇವ ಜಗತಾಂ ಮಾತಾ ನ ವಿಜ್ಞೋಽಪರಃ ।**
**ದೇವಿ ತ್ವಂ ಪರಿಹಾಸಕೇಲಿಕಲಹೇಽನನ್ತಾ ತ್ವಮೇವೇತ್ಯಥ**
**ಜ್ಞಾತಾನಂತಪದೋ ನಮನ್ ಜಲಧಿಜಾಂ ಶೌರಿಶ್ಚಿರಂ ಪಾತುವಃ॥**

ವಾಕ್ಪತಿರಾಜ (ಕ.ವ.ಸ.)

ವಿಷ್ಣು—ದೇವಿ, ನೀನು ಕೋಪಗೊಂಡಿದ್ದಿ. (ಕುಪಿತಾ= ಕೋಪಗೊಂಡಿದ್ದಿ)

ಲಕ್ಷ್ಮಿ—ನಾನಲ್ಲ, ನೀನು ಪೃಥ್ವಿಯ ತಂದೆ.(ಕು=ಭೂಮಿಗೆ, ಪಿತಾ=ತಂದೆ); ನೀನಲ್ಲದೆ ಮತ್ತಾರು ಲೋಕದ ಗುರು?

ವಿಷ್ಣು—ಹಾಗಾದರೆ ನೀನು ಜಗತ್ತಿನ ತಾಯಿ. (ಮಾತಾ ಜಗತಾಂ)

ಲಕ್ಷ್ಮಿ—ಅಲ್ಲ, ನೀನೇ ಜಗತ್ತನ್ನು ಅಳೆಯಬಲ್ಲವನು. (ಮಾತಾ=ಅಳೆಯಬಲ್ಲವನು.)

ವಿಷ್ಣು—ದೇವಿ, ನೀನು ಪರಿಹಾಸಕೇಳಿಕಲಹದಲ್ಲಿ ಕೊನೆ ತೋರದವಳು (ಅನನ್ತಾ).

ಲಕ್ಷ್ಮಿ—ನಾನಲ್ಲ, ನೀನೇ ಅನಂತ.

ವಿಷ್ಣುವಿಗೆ ಇನ್ನು ಪ್ರತ್ಯುತ್ತರ ಕೊಡಲಾಗಲಿಲ್ಲ. ಲಕ್ಷ್ಮಿಗೆ ತಲೆ ಬಾಗಿದನು. ಅಂತಹ ಶೌರಿ ನಮ್ಮನ್ನು ಕಾಪಾಡಲಿ.

ಇವು ಈ ಪದ್ಯಗಳ ಶುಷ್ಕಾನುವಾದ. ಇದರಲ್ಲಿ ಸೌಂದರ್ಯ ವಿರುವುದು ಕವಿಯ ಉಕ್ತಿವೈಚಿತ್ರ್ಯದಲ್ಲಿ. ಅದನ್ನು ಪರಿವರ್ತಿ ಸುವುದಕ್ಕಾಗುವುದಿಲ್ಲ; ಓದಿ ಅನುಭವಿಸಬೇಕು.

## ಭಗವದ್ಭಕ್ತಿ

ಸಾಮಾನ್ಯವಾಗಿ ಇಂಗ್ಲಿಷಿನ ಸಂಗ್ರಹಗಳಲ್ಲಿ ಭಾವಗೀತೆಗಳನ್ನು ಹೆಚ್ಚಾಗಿ ಸಂಗ್ರಹಿಸಿದ್ದಾರೆಯೇ ಹೊರತು ಭಗವದ್ವರ್ಣನೆ ಮತ್ತು ಸ್ತೋತ್ರ ಪದ್ಯಗಳನ್ನು ಸೇರಿಸಿಲ್ಲ. ಇವಿಲ್ಲದ ಸುಭಾಷಿತ ಸಂಗ್ರಹಗಳು ಸಂಸ್ಕೃತದಲ್ಲಿ ಇಲ್ಲವೆನ್ನಬಹುದು. ಭಗವಂತನನ್ನು, ಒಂದಲ್ಲ ಒಂದುಬಾರಿ, ಒಂದಲ್ಲ ಒಂದು ರೀತಿ ನೆನೆಯದ ಮಾನವನಿಲ್ಲ. ಅವನನ್ನು ನೆನೆಯದಿದ್ದವನ ಹೃದಯದಲ್ಲಿ ಅರೆಯಿದ್ದಂತೆ, ಜೀವನವೇ ಅನೇಕಬಾರಿ ಶೂನ್ಯವಾಗಿದ್ದಂತೆ ತೋರುತ್ತದೆ. ಆದುದರಿಂದಲೇ, ಎಲ್ಲ ಮತಗಳೂ ಎಲ್ಲ ಧರ್ಮಗಳೂ ಎಲ್ಲ ಸಂಪ್ರದಾಯಗಳೂ ಪ್ರಪಂಚಕ್ಕೆ ಮೀರಿದ ಶಕ್ತಿಯಿದೆಯೆಂದೂ ಸರ್ವಗುಣ ಪೂರ್ಣನಾದ ಭಗವಂತನ ಸಾಕ್ಷಾತ್ಕಾರವೇ ಜೀವನದ ಗುರಿಯೆಂದೂ ಸಾರಿವೆ. ಇಂತಹ ಭಗವಂತನನ್ನು ವರ್ಣಿಸಿರುವ ಕೆಲವು ಪದ್ಯಗಳನ್ನು ಇಲ್ಲಿ ಕೊಡಲಾಗುವುದು. ಈ ಸ್ತೋತ್ರದಲ್ಲಿಯೂ ಕಾವ್ಯರಸದ ಪ್ರವಾಹ ಹರಿಯುತ್ತಿರುವುದನ್ನು ಓದುಗರು ಕಾಣಬಹುದು.

ಭಗವಂತನಲ್ಲಿ ನಿಶ್ಚಲವಾದ ಭಕ್ತಿಯಿರುವವನು ಏತಕ್ಕೂ ಹೆದರಬೇಕಾದುದಿಲ್ಲ. ಹುಟ್ಟುಸಾವುಗಳಿಂದ ಬರುವ ದುಃಖವು ಕೂಡ ಭಕ್ತನಿಗೆ ಲೆಕ್ಕವಿಲ್ಲ.

**ತ್ವಯಿ ಜನಾರ್ದನ ಭಕ್ತಿರಚಂಚಲಾ**
**ಯದಿ ಭವೇದಫಲಪ್ರವಣಾ ಮಮ ।**
**ಅಭಿಲಷಾಮ್ಯಪವರ್ಗಪರಾಙ್ಮುಖಃ**
**ಪುನರಪೀಹ ಶರೀರಪರಿಗ್ರಹಂ ॥** ಆನಂದವರ್ಧನ (ಸು. ವ.)

ಭಗವನ್, ನಿಶ್ಚಲವೂ, ಅಕಾರಣವೂ ಆದ ಭಕ್ತಿ ನಿನ್ನಲ್ಲಿ

ನನಗಿರುವುದಾದರೆ, ನಾನು ಮುಕ್ತಿಯನ್ನು ಕೂಡ ಬಯಸದೆ ಪುನಃ ಶರೀರಧಾರಣಮಾಡಬಯಸುತ್ತೇನೆ.

ಶರಣಾಗತಿ :

ತನ್ನ ತಪ್ಪನ್ನು ಅರಿತ ಭಕ್ತನೊಬ್ಬನ ಬೇಡಿಕೆಯಿದು—

**ಧ್ಯಾತೋಽಸಿ ನೋ ಮಧುರಿಪೋ ನ ಚ ಕೀರ್ತಿತೋಽಸಿ**
**ನೈವ ಸ್ತುತೋಽಸಿ ನ ಕಥಾಪಿ ಕೃತಾ ತ್ವದೀಯಾ ।**
**ಭಕ್ತ್ಯಾ ತೃಣೈರಪಿ ಮಯಾ ನ ಚ ಪೂಜಿತೋಽಸಿ**
**ತತ್ರಾಪಿ ಮೇ ಕುರು ದಯಾಂ ಶರಣಾಗತಸ್ಯ ॥** (ಸು. ವ.)

ಒಂದು ಬಾರಿಯಾದರೂ ನಿನ್ನನ್ನು ಧ್ಯಾನಿಸಲಿಲ್ಲ. ಒಮ್ಮೆ ನಿನ್ನ ಕೀರ್ತನ ಮಾಡಲಿಲ್ಲ. ನಿನ್ನ ಕಥೆಯನ್ನು ಕೂಡ ಸ್ಮರಿಸ ಲಿಲ್ಲ. ಕೊನೆಗೆ ಹುಲ್ಲೆಸಳನ್ನಾದರೂ ಭಕ್ತಿಯಿಂದ ಅರ್ಪಿಸಿ ನಿನ್ನನ್ನು ಪೂಜಿಸಲಿಲ್ಲ. ಆದರೂ ಈಗ ನಾನು ಶರಣಾಗತನಾಗಿ ಬಂದಿದ್ದೇನೆ. ನನ್ನ ಮೇಲೆ ದಯೆತೋರು.

ಪ್ರಪಂಚದಲ್ಲಿರುವ ಅನ್ಯಾಯವನ್ನು ಕಂಡು ನೊಂದ ಭಕ್ತನ ರೋಷವಾಕ್ಯ :

**ಭೂತಿರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯ ಕೋಲಾಹಲೋ**
**ನಾಶೋ ಹಂತ ಸತಾಮಸತ್ಫಲಜುಷಾಮಾಯುಸ್ಸಮಾನಾಂ ಶತಂ ।**
**ದುರ್ನೀತಿಂ ತವ ವೀಕ್ಷ್ಯ ಕೋಪದಹನಜ್ವಾಲಾಜಟಾಲೋಽಪಿ ಸನ್**
**ಕಿಂಕುರ್ವೇ ಜಗದೀಶ ಯತ್ಪುನರಹಂ ದೀನೋ ಭವಾನೀಶ್ವರಃ ॥**
ಜಗನ್ನಾಥ (ಸು. ರ. ಭಾ.)

ನೀಚರ ಮನೆಯಲ್ಲಿ ಬೇಕಾದಷ್ಟು ಸಂಪತ್ತು, ಸತ್ಪುರುಷನ ಮನೆಯಲ್ಲಿ ಕಡುಬಡತನ. ಸಜ್ಜನರಿಗೆ ಕ್ಷೀಣಾಯುಸ್ಸು, ಕೆಟ್ಟ

ಕೆಲಸಮಾಡುವವರಿಗೆ ನೂರುವರುಷ. ನಿನ್ನ ಈ ದುರ್ನೀತಿ ಯನ್ನು ಕಂಡು ಕೋಪಾಗ್ನಿಯು ಜ್ವಾಲೆಗಳಿಂದ ಸುತ್ತುಗೊಂಡ ವನಾಗುತ್ತೇನೆ. ಆದರೇನು? ನೀನು ಈಶ್ವರ, ನಾನು ದೀನ.

ಈಶ್ವರನು ಜೀವನಲ್ಲಿ ಅಂತರ್ಯಾಮಿಯಾದರೂ ಜೀವನಿಂದ ಅತಿಶಯಿತ ಎಂಬ ಭಾವವನ್ನು ಇಲ್ಲಿ ಸೂಚಿಸಿದೆ.

**ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಂ ।**
**ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥**

(ಸು. ವ.)

ಒಡೆಯ, ನಿನಗೂ ನನಗೂ ಭೇದವಿಲ್ಲ. ಆದರೂ ನಾನು ನಿನ್ನಲ್ಲಿ ಸೇರಿದವನು, ನಿಜ; ನೀನು ನನ್ನಲ್ಲಿ ಸೇರಿದವನಲ್ಲ. ಅಲೆಯೇನೋ ಸಮುದ್ರದ್ದು; ಆದರೆ ಸಮುದ್ರವು ಅಲೆಯದಲ್ಲ.

ಈ ಸಂಗ್ರಹಗಳಲ್ಲಿನ ಪದ್ಯಗಳು ಕವಿ ಹೃದಯದಿಂದ ಬಂದವು. ಈ ಕವಿಗಳು ಜೀವನದ ಅನೇಕ ಸನ್ನಿವೇಶಗಳನ್ನೂ ವಸ್ತುಗಳನ್ನೂ ಭಾವಗಳನ್ನೂ ತಮ್ಮದೇ ಆದ ಒಂದು ನೈಪುಣ್ಯದಿಂದ ಚಿತ್ರಿಸಿ, ಆ ಚಿತ್ರಗಳಿಗೆ ಒಂದು ಹೊಸ ರೂಪನ್ನೂ ಬಣ್ಣವನ್ನೂ ಕೊಟ್ಟಿದ್ದಾರೆ. ತಮಗೆ ಪರಿಚಿತವಾದ ವ್ಯಕ್ತಿಗಳನ್ನು ಒಂದು ಹೊಸ ಪ್ರಪಂಚಕ್ಕೆ ಒಯ್ದು ಕ್ಷಣಿಕವಾದುದರಲ್ಲಿ ಶಾಶ್ವತಿಯನ್ನು ತೋರಿಸಿ, ಸಾಮಾನ್ಯಭಾವದಲ್ಲಿ ಸ್ವಾರಸ್ಯತೋರುವಂತೆ ಮಾಡಿ ಜೀವನದ ಅಚ್ಚರಿಯನ್ನು ತಾವು ಕಂಡು ಇತರರಿಗೆ ತಿಳಿಸಲು ಪ್ರಯತ್ನಿಸಿದ್ದಾರೆ. ಇಂತಹವುಗಳನ್ನು ನಾವು ಓದಿದರೆ ನಮಗೆ ಸಂತೋಷವಾಗುತ್ತದೆ. ಅವರ ಕೃತಿ ಸಾರ್ಥಕವಾಗುತ್ತದೆ.



೧೮. ಕಾಳಿದಾಸನ ಕಾವ್ಯಗಳು-ಎಸ್. ರಾಮಚಂದ್ರರಾವ್, ಎಂ.ಎ

೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ-
ಪಿ. ಜಿ. ಸತ್ಯಗಿರಿನಾಥನ್, ಎಂ.ಎ

೨೦. ಕಣ್ಣು ಮತ್ತು ಅದರ ರಕ್ಷಣೆ-ಡಿ. ಶಾಮಣ್ಣ,
ಬಿ.ಎ., ಎಂ.ಬಿ.ಬಿ.ಎಸ್.

೨೧. ಸಾರ್ವಜನಿಕ ವೆಚ್ಚ-ಎಂ. ಎಚ್. ಗೋಪಾಲ್,
ಎಂ.ಎ., ಪಿಎಚ್.ಡಿ

೨೨. ಶಿಶುವಿಹಾರಗಳು-ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.

೨೩. ಸಂಖ್ಯೋದ್ಯಾನ-ಬಿ. ಸೀತಾರಾಮಶಾಸ್ತ್ರೀ, ಎಂ.ಎ.

೨೪. ವಿಡಂಬನ-ಎಸ್. ವಿ. ರಂಗಣ್ಣ, ಎಂ.ಎ.

೨೫. ಅಜಂತ ಮತ್ತು ಎಲ್ಲೋರ-ಡಾ|| ಎಂ. ಎಚ್. ಕೃಷ್ಣ,
ಎಂ.ಎ., ಡಿ.ಲಿಟ್.

೨೬. ಸಾರಜನಕದ ಮಹತ್ವ-ಎಚ್. ಸುಬ್ಬಜೋಯಿಸ್, ಎಂ.ಎಸ್‌ಸಿ

೨೭. ಭಾಸ-ಎಚ್. ಎಲ್. ಹರಿಯಪ್ಪ, ಎಂ.ಎ.

೨೮. ಪಾಶ್ಚಾತ್ಯ ರಾಜಕೀಯತತ್ವಗಳು-
ಎಂ. ಯಾಮುನಾಚಾರ್ಯ, ಎಂ.ಎ

೨೯. ಸರ್ವಜ್ಞ ಕವಿ-ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೩೦. ರಕ್ತ-ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್.

೩೧. ಇಂಗ್ಲಿಷ್ ಪ್ರಬಂಧಗಳು-ಎಸ್. ಮಂಜನಾಥ್, ಎಂ.ಎ.

೩೨. ಅಕ್ಕಮಹಾದೇವಿ-ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.

೩೩. ಗಣಿತಶಾಸ್ತ್ರದ ಸ್ವರೂಪ-ಸಿ. ಎನ್. ಶ್ರೀನಿವಾಸಅಯ್ಯಂಗಾರ್,
ಡಿ.ಎಸ್‌ಸಿ.

೩೪. ಋಗ್ವೇದ-ಎಂ. ಎ. ಕೃಷ್ಣಸ್ವಾಮಿ, ಎಂ.ಎ.

೩೫. ಕುಮಾರವ್ಯಾಸ ವಾಣಿ-ಎಸ್. ವಿ. ರಂಗಣ್ಣ, ಎಂ.ಎ.

೩೬. ಆಳ್ವಾರುಗಳು-ಎಂ. ಯಾಮುನಾಚಾರ್ಯ, ಎಂ.ಎ.

೩೭. ಹಿಂದುಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರು-
ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.

೩೮. ಸುಭಾಷಿತ ಸಂಗ್ರಹಗಳು-ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.

೩೯. ಮಕ್ಕಳ ಭಾವಜೀವನ- ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.

೧೯೪೨ ನೆಯ ಜುಲೈನಿಂದ ಮುಂದಕ್ಕೆ ಅಚ್ಚಾಗುವ ಪುಸ್ತಕಗಳ ಸಾಧಾರಣ ಪ್ರತಿ ೩ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೧-೪-೦; ಉತ್ತಮ ಪ್ರತಿ ೪ ಆಣೆ; ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೨-೦-೦.

ಸಂಪಾದಕ, ಪ್ರಚಾರಪುಸ್ತಕಮಾಲೆ,
ಯೂನಿವರ್ಸಿಟಿ ಆಫೀಸ್, ಮೈಸೂರು.